# ಆದಿತ್ಯ

ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org







# ಆದಿತ್ಯ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38

ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000

**ಬೆಲೆ. 45/–**

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ತಾಯಿ ತಂದೆ.
27. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಹೇತುವಾದ ಪ್ರಶ್ನೆಗಳು– ಸತ್ಯವಾದ ಉತ್ತರಗಳು
86. ಮೂರು ದೈವಗ್ರಂಥಗಳು–ಮೂರು ಪ್ರಥಮ ವಾಕ್ಯಗಳು



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ - ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ- ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು- ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು- ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು- ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು- ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು- ಆರು-ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು-ಅಂತಮು.
114. ಮಾಯ ಮರ್ಮಮು-ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ಗ್ರಂಥಮುಲೊ-ಪ್ರಥಮ ವಾಕ್ಯಮುಲು
117. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.



# 'ಇಂದೂ ಜ್ಞಾನವೇದಿಕೆ' ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮಿಣಾರಾಯಣಾಚಾರಿ–09440556968.
ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ–38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್,
ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ಈ ಮಧ್ಯ ಕಾಲದಲ್ಲಿ ಒಬ್ಬ ಮುಸ್ಲಿಮ್ ಸಹೋದರನು ನಮ್ಮ ಖುರ್‌ಆನ್‌ನನ್ನು ಮನುಷ್ಯರು ಬರೆಯಲಿಲ್ಲ, ದೇವರು ಕೊಟ್ಟಿರುವಾಗ ಆಕಾಶದಿಂದ ಇಳಿದು ಬಂದಿರುವುದೆಂದು ಹೇಳುವುದನ್ನು ಕೇಳಿದ್ದೇವೆ. ಆ ಮಾತನ್ನು ಆತನು ಸ್ವತಃವಾಗಿ ಹೇಳದಿದ್ದರೂ ಮುಸ್ಲಿಮ್ ಹಿರಿಯರು ಯಾರಾದರೂ ಹೇಳಿದಾಗ ಕೇಳಿ ಹೇಳುತ್ತಿರುವನೆಂದು ಅಂದುಕೊಂಡಿದ್ದೇವೆ. ಆತನ ಉದ್ದೇಶದಲ್ಲಿ ಹಿಂದೂಗಳ ಭಗವದ್ಗೀತೆಯಾಗಲೀ, ಕ್ರೈಸ್ತರ ಬೈಬಲ್ ಯಾಗಲೀ ಮನುಷ್ಯರು ಬರೆದಿರುವಾಗ ತಯಾರಾಗಿವೆಯೆಂದು, ಖುರ್‌ಆನ್ ಮಾತ್ರ ಮನುಷ್ಯರು ಬರೆಯದಂತೆ ದೇವರೇ ಮೇಲಿನಿಂದ ನೇರವಾಗಿ ಮನುಷ್ಯರ ಹತ್ತಿರಕ್ಕೆ ಕಳುಹಿಸಿದ್ದಾನೆಂದು ಅಂದುಕೊಳ್ಳುವುದರಿಂದ, ಆತನು ಆ ರೀತಿ ಹೇಳಿದ್ದಾನೆ.

**ಪ್ರಶ್ನೆ :– ದೈವಗ್ರಂಥಗಳು ಮೂರೆಂದು ನೀವು ಹೇಳುತ್ತಿರುವುದನ್ನು ನಾವು ಬಹಳ ಸಲ ನೋಡಿದ್ದೇವೆ. ಭಗವದ್ಗೀತೆಯನ್ನು ಪ್ರಥಮ ದೈವಗ್ರಂಥವೆಂದು ನೀವೇ ಹೇಳಿದ್ದೀರ. ಹಾಗೇ ಇಂಜೀಲ್ (ಬೈಬಲ್) ದ್ವಿತೀಯ ದೈವ ಗ್ರಂಥವೆಂದು, ಖುರ್‌ಆನ್ ಅಂತಿಮ ದೈವಗ್ರಂಥವೆಂದು ನೀವೇ ಹೇಳಿರುವಾಗ ಕೇಳಿದ್ದೇವೆ. ಹಾಗಿರುವಾಗ ಪ್ರಥಮ, ದ್ವಿತೀಯ ದೈವಗ್ರಂಥಗಳು ಎರಡೂ ಮನುಷ್ಯರ ರಚನೆಯಾದಾಗ, ಅಂತಿಮ ದೈವಗ್ರಂಥ ಮಾತ್ರ ಮೇಲಿಂದ ನೇರವಾಗಿ ದೇವರ ಹತ್ತಿರದಿಂದ ಇಳಿದು ಬಂದಿದೆ ಎನ್ನುವುದು ಶಾಸ್ತ್ರಬದ್ಧವಾದ ವಾಕ್ಯವೆನ್ನುತ್ತೀರಾ?**

**ಉತ್ತರ :–** ಮುಸ್ಲಿಮ್ ಸಹೋದರನು ಹೇಳಿದ ಮಾತಿನಲ್ಲಿ ಸ್ವಲ್ಪ ಸತ್ಯ ವಿದೆಯಾಗಲೀ, ಸತ್ಯ ಹೇಗಿದೆಯೆಂದು ಅವರಿಗೆ ತಿಳಿದಿಲ್ಲ. ದೇವರಿಂದ ಬಂದಿರುವ ದೈವಜ್ಞಾನದಿಂದ ಕೂಡಿಕೊಂಡಿರುವವು ಭೂಮಿಮೇಲೆ ಮೂರು ಗ್ರಂಥಗಳೇ ಇವೆ. ಆದರೇ ಆ ಮೂರು ಗ್ರಂಥಗಳು ಮನುಷ್ಯರಿಂದ ಬರೆಯಲ್ಪಟ್ಟಿರು ವವೇ ಎಂದು ಹೇಳಬೇಕಾಗುತ್ತದೆ. ಮೂರು ಗ್ರಂಥಗಳು ದೈವಜ್ಞಾನದಿಂದ ತುಂಬಿರುವು ದರಿಂದ **"ದೇವರ ಜ್ಞಾನವನ್ನು ದೇವರು ಹೊರತು ಯಾವ ಇತರ ಮಾನವನು**

**ಹೇಳಲಾರನು"** ಎಂಬ ಸೂತ್ರದ ಪ್ರಕಾರ ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ಹೇಳಿರುವವನು ದೇವರೇಯೆಂದು ಹೇಳಬಹುದು. ಆದರೇ ದೇವರು ಮೂರು ಗ್ರಂಥಗಳಲ್ಲಿ ಯಾವ ಒಂದು ಗ್ರಂಥವನ್ನಾಗಲೀ ದೇವರೇ ಸ್ವತಃವಾಗಿ ಬರೆಯುವು ದಾಗಲೀ, ಅಥವಾ ಮೇಲಿಂದ ಕೊಡುವುದಾಗಲೀ ಮಾಡಲಿಲ್ಲ. ಹಾಗೆ ಮಾಡಿದ್ದಾನೆನ್ನುವುದು ಶಾಸ್ತ್ರವಿರುದ್ಧವಾಗುತ್ತದೆ. ದೇವರು ತನ್ನ ಜ್ಞಾನವನ್ನು ಮೇಲಿಂದ ಕೊಟ್ಟಿರುವುದು ವಾಸ್ತವವೇ, ಆದರೂ ಗ್ರಂಥರೂಪದಲ್ಲಿ ಕೊಡಲಿಲ್ಲ. ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ಕೊಡುವ ವಿಷಯದಲ್ಲಿ ಅಂತಿಮ ದೈವ ಗ್ರಂಥವಾದ ಖುರ್‌ಆನ್‌ನಲ್ಲೇ ಸೂರಾ 3, ಆಯತ್ 7 ರಲ್ಲಿ ಹೀಗೆ ಹೇಳಿದ್ದಾನೆ. **"ದೇವರ ಜ್ಞಾನ ದೇವರಿಗೆ ಹೊರತು ಯಾವ ಮಾನವನಿಗೂ ತಿಳಿಯದೆಂದು"** ಹೇಳಿದ್ದಾನೆ. ಅಷ್ಟೇ ಅಲ್ಲದೆ ಸೂರಾ 42, ಆಯತ್ 51ರಲ್ಲಿ ಹೀಗೆ ಹೇಳಿದ್ದಾನೆ. **(42–51) "ದೇವರು ಯಾವ ಮಾನವನೊಂದಿಗೂ ನೇರವಾಗಿ ಮಾತನಾಡುವುದಿಲ್ಲ. ದೇವರೊಂದಿಗೆ ಮಾತನಾಡುವುದು ಮನುಷ್ಯನಿಗೆ ಸಾಧ್ಯವಾಗುವ ಕೆಲಸವಲ್ಲ. ದೇವರು ತನ್ನ ಜ್ಞಾನವನ್ನು ವಾಣಿ (ವಹೀ)ಮೂಲಕ ಅಥವಾ ತೆರೆ ಹಿಂಬದಿಯಿಂದಲೋ ಮನುಷ್ಯನಿಗೆ ಸೇರಿಸುತ್ತಾನೆ. ಇಲ್ಲವೆ ತಾನು ಕೋರಿರುವುದು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳುಹಿಸುತ್ತಾನೆ. ಆತನು ಮಹೋನ್ನತನು, ಎಷ್ಟೋ ವಿವೇಕವಂತನು"** ಈ ರೀತಿ ದೇವರು ಹೇಳಿದ್ದಾನೆ, ಆದ್ದರಿಂದ ದೇವರು ಜ್ಞಾನವನ್ನು ಮನುಷ್ಯರಿಗೆ ತಿಳಿಸುವೆನೆಂದು ಹೇಳಿದ್ದಾನಾಗಲೀ, ಗ್ರಂಥರೂಪದಲ್ಲಿ ತಿಳಿಸುತ್ತೇನೆಂದು, ಗ್ರಂಥರೂಪದಲ್ಲಿ ಮೇಲಿನಿಂದ ಕೊಡುತ್ತೇನೆಂದು ಹೇಳಲಿಲ್ಲ. ತನ್ನ ಮೂರು ವಿಧಾನಗಳಲ್ಲಿ ಮೊದಲನೆಯದು ಶಬ್ಧದಿಂದ (ವಾಣಿಯಿಂದ) ತಿಳಿಸುತ್ತೇನೆಂದು ಹೇಳಿದ್ದಾನೆ. ಆ ವಿಧಾನ ಸೃಷ್ಠಿ ಆದಿಯಲ್ಲೇ ನಡೆದು ಹೋಗಿದೆ. ಆಕಾಶವಾಣಿ ಯಿಂದ ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ಕಳುಹಿಸುವುದು ನಡೆದಿದೆ. ಹಾಗೆ ಬಂದಿರುವ ಜ್ಞಾನ ಶಬ್ಧರೂಪದಿಂದ ಬಂದಿದೆ ಹೊರತು, ಗ್ರಂಥರೂಪದಲ್ಲಿ ಬರಲಿಲ್ಲ. ಶಬ್ಧರೂಪದಲ್ಲಿ ಬಂದಿರುವುದನ್ನು ಬೋಧ ಎನ್ನುತ್ತೇವೆ. ಮೊದಲು ಬೋಧನೆ ರೂಪದಲ್ಲಿ ಶಬ್ಧವಾಗಿ ಬಂದಿರುವ ಜ್ಞಾನ ಮೂರು ಯುಗಗಳ

ನಂತರ ಗ್ರಂಥಗಳಾಗಿ ಬರೆಯುವುದು ನಡೆದಿದೆ. ಅಲ್ಲಿಯವರೆಗೂ ದೇವರ ಜ್ಞಾನ ಬೋಧನೆರೂಪದಲ್ಲೇ ಇರುತ್ತಿತ್ತಾಗಲೀ ಗ್ರಂಥವಾಗಿ ಇಲ್ಲ.

ಕೃತಯುಗ, ತ್ರೈತಾಯುಗ ಇಲ್ಲವೆ ತ್ರೇತಾಯುಗ, ದ್ವಾಪರಯುಗ ಕಳೆದಾಗ ದ್ವಾಪರ ಯುಗದ ಕೊನೆಯಲ್ಲಿ ಬೋಧರೂಪದಲ್ಲಿರುವ ಜ್ಞಾನ ಗ್ರಂಥರೂಪವಾಗಿ ಬದಲಾಗಿದೆ. ಅಲ್ಲಿಯವರೆಗು ಬೋಧರೂಪವಾಗಿರುವ ಜ್ಞಾನಕ್ಕೆ **"ಜಪರ"** ಎಂಬ ಹೆಸರಿತ್ತು. ಜಪರ ಎಂಬ ಹೆಸರು ಕಾಲಕ್ರಮೇಣ ಬದಲಾಗಿ ಈದಿನ ಆ ಹೆಸರು **"ಜಬುರ"** ಎಂದು ಬದಲಾಗಿದೆ. ಜಪರ ಎಂದರೇ ಹುಟ್ಟಿರುವುದಕ್ಕಿಂತ ಬೇರೆಯಾಗಿ ಇದೆಯೆಂದು ಅರ್ಥ. ಪ್ರಪಂಚ ಹುಟ್ಟಿದೆ. ಹುಟ್ಟಿರುವ ಪ್ರಪಂಚಕ್ಕಿಂತ ಬೇರೆಯಾಗಿ ಇರುವುದರಿಂದ 'ಜಪರ' ಎಂದು ಹೇಳಲಾಗಿದೆ. 'ಜ' ಎಂದರೇ ಹುಟ್ಟಿರುವುದೆಂದು ಅರ್ಥ. 'ಪರ' ಎಂದರೇ ಬೇರೆಯಾಗಿರುವುದೆಂದು ಅರ್ಥ. 'ಜಪರ' ಎಂದರೇ ಹುಟ್ಟಿರುವುದಕ್ಕಿಂತ ಬೆರೆಯಾಗಿರುವುದೆಂದು ದೇವರ ಜ್ಞಾನವೆಂದು ತಿಳಿಯುವಹಾಗೆ ಆ ಹೆಸರು ಇಡಲಾಗಿದೆ. ಅದು ಸ್ವಲ್ಪ ಬದಲಾಗಿ ಅರ್ಥವಿಲ್ಲದ ಹೆಸರಾಗಿ 'ಜಬುರ' ಎಂದು ಕರೆಯಲ್ಪಡುತ್ತಿದೆ. ಈ ದಿನ ಕೆಲವರು ಮುಸ್ಲಿಮ್‌ರು ಕ್ರಮವಾಗಿ ನಾಲ್ಕು ಗ್ರಂಥಗಳ ಹೆಸರನ್ನು ಹೇಳುತ್ತಿರುವಾಗ ಕೇಳಿದ್ದೇವೆ. ಅವರು ಹೇಳಿರುವ ಹೆಸರುಗಳು ಕ್ರಮವಾಗಿ ಜಬುರ, ತೌರಾತ್, ಇಂಜೀಲ್, ಖುರ್‌ಆನ್ ಎಂದು ಹೇಳಿದ್ದಾರೆ. ಆ ಮಾತನ್ನು ಕೇಳಿದ ನಾವು 'ಜಬುರ' ಎನ್ನುವುದು ಗ್ರಂಥವಾ? ಎಂದು ಕೇಳಿದ್ದೇವೆ. ಆಗ ಅವರು ಗ್ರಂಥವೇ ಎಂದು ಹೇಳಿದ್ದಾರೆ.

ವಾಸ್ತವವಾಗಿ 'ಜಬುರ' ಎನ್ನುವುದು ಗ್ರಂಥವೇ ಅಲ್ಲ. ಅದು ದೇವರು ಆಕಾಶದಿಂದ ವಾಣಿಮೂಲಕ ತಿಳಿಸಿದ ಜ್ಞಾನವು ಬೋಧರೂಪವಾಗಿರುವಾಗ ಅದನ್ನೇ 'ಜಪರ' ಎಂದು ಹೇಳುವುದಾಗಿದೆ. ಹುಟ್ಟಿರುವ ಪ್ರಕೃತಿಗಿಂತ ಪ್ರತ್ಯೇಕ ವಾದದು ಜ್ಞಾನವಾಗಿರುವುದರಿಂದ ಜಪರ ಎಂದು ಅರ್ಥಸಹಿತ ಹೆಸರನ್ನು ಹೇಳಲಾಗಿದೆ ಆದರೆ, ಜಪರ (ಜಬುರ) ಗ್ರಂಥವಲ್ಲ. ಜಪರ ಜ್ಞಾನ ಮೊದಲು ಭಗವದ್ಗೀತೆಯಾಗಿ ಬರೆಯಲ್ಪಟ್ಟಿದೆ. ನಂತರ ಕಾಲ ಕಳೆಯುತ್ತಿದ್ದಂತೆ ಇಂಜೀಲ್

ಗ್ರಂಥವಾಗಿ, ಖುರ್‌ಆನ್ ಗ್ರಂಥವಾಗಿ ಬರೆಯಲ್ಪಟ್ಟಿದೆ. ಈ ರೀತಿ 1400 ವರ್ಷಗಳ ಪೂರ್ವದಲ್ಲಿ ಖುರ್‌ಆನ್ ಗ್ರಂಥರೂಪವಾಗಿದೆ. ಖುರ್‌ಆನ್ ಅರಬ್ಬೀ ಭಾಷೆಯಲ್ಲಿ ಬರೆದಿರುವಾಗ, ಇಂಜೀಲ್ (ಬೈಬಲ್) ಹೆಬ್ರೀ ಭಾಷೆಯಲ್ಲಿ, ಭಗವದ್ಗೀತೆ ಸಂಸ್ಕೃತ ಭಾಷೆಯಲ್ಲಿ ಬರೆಯಲ್ಪಟ್ಟಿವೆ. ಈ ರೀತಿ ಮೂರು ಯುಗಗಳ ನಂತರ ದೇವರು ಮೊದಲು ಹೇಳಿದ ಜ್ಞಾನ ಗ್ರಂಥಗಳಾಗಿ ಬದಲಾಗಿದೆ. ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನ ಒಂದೇ, ಬೇರೆಬೇರೆ ಕಾಲಗಳಲ್ಲಿ, ಬೇರೆಬೇರೆ ಹೆಸರುಗಳಿಂದ, ಬೇರೆಬೇರೆ ಗ್ರಂಥಗಳಾಗಿ ತಯಾರಾಗಿದೆ. ಅದರಲ್ಲಿ ಮೊದಲನೆಯದು ಭಗವದ್ಗೀತೆ ಕೊನೆಯದು ಖುರ್‌ಆನ್ ಗ್ರಂಥ.

**ಪ್ರಶ್ನೆ :– ಮೊದಲು ಬಂದಿರುವ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿಯೂ, ಕೊನೆಯಲ್ಲಿ ಬಂದಿರುವ ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿಯೂ, ಮಧ್ಯದಲ್ಲಿರುವ ಇಂಜೀಲ್ ಗ್ರಂಥದಲ್ಲಿಯೂ ಒಂದೇ ಜ್ಞಾನವಿದ್ದರೇ, ಒಂದೇ ದೇವರನ್ನು ಕುರಿತು ಹೇಳಿದ್ದರೇ ಭಗವದ್ಗೀತೆಯಲ್ಲಿ ದೇವರನ್ನು "ಪರಮಾತ್ಮ" ಎಂದು ಅಂದಿದ್ದಾರೆ. ಕೊನೆಯ ಗ್ರಂಥವಾದ ಖುರ್‌ಆನ್‌ನಲ್ಲಿ "ಅಲ್ಲಾ" ಎಂದಿದ್ದಾರೆ. ಒಂದೇ ದೇವರನ್ನು ಒಂದು ಕಡೆ ಪರಮಾತ್ಮಯೆಂದೂ, ಮತ್ತೊಂದು ಕಡೆ ಅಲ್ಲಾಹ್ ಎಂದು ಏಕೆ ಹೇಳಿದ್ದಾರೆ? ಹಾಗೆ ಹೇಳುವುದರಿಂದ ಭಗವದ್ಗೀತೆಯಲ್ಲಿನ ದೇವರು ಬೇರೆ, ಖುರಾನ್‌ನಲ್ಲಿನ ದೇವರು ಬೇರೆ ಎಂದು ಅಂದುಕೊಳ್ಳುವುದಕ್ಕೆ ಅವಕಾಶವಿದೆ ಅಲ್ಲವೆ! ಹಾಗೆಯೇ ಆ ಎರಡು ಗ್ರಂಥಗಳಲ್ಲಿನ ಜ್ಞಾನವೂ ಸಹ ಬೇರೆಬೇರೆಯಾಗಿ ಇದೆಯೆಂದು ಏಕೆ ಅಂದುಕೊಳ್ಳಬಾರದು? ಗ್ರಂಥದ ಹೆಸರು ಬೇರೆ, ದೇವರ ಹೆಸರು ಬೇರೆ, ಜ್ಞಾನವೂ ಸಹ ನೋಡುವುದಕ್ಕೆ ಬೇರೆಯಾಗಿಯೇ ಕಾಣಿಸುತ್ತದೆ. ಹಾಗಿರುವಾಗ ಎರಡು ಗ್ರಂಥಗಳು ಬೇರೆಯಾಗಿ ಇವೆಯೆಂದು ಭಗವದ್ಗೀತೆ ಹಿಂದೂಗಳದೆಂದು, ಖುರ್‌ಆನ್ ಮುಸ್ಲಿಮ್‌ರದೆಂದು ಏಕೆ ಹೇಳಬಾರದು? ದೇವರ ಹೆಸರು, ಗ್ರಂಥದ ಹೆಸರು, ಹೇಳಿದ ಕಾಲ, ಹೇಳಿದ ಪ್ರವಕ್ತನ (ಪ್ರವಾದಿಯ) ಹೆಸರು ಎಲ್ಲವೂ ಬೇರೆಯಾಗಿರುವುದರಿಂದ ಎರಡು ಗ್ರಂಥಗಳು ಬೇರೆಬೇರೆಯಾಗಿ ಇವೆಯೆಂದು, ಅವುಗಳಲ್ಲಿನ ದೇವರು, ದೇವರ ಜ್ಞಾನ ಬೇರೆಯೆಂದು ನಾವೇಕೆ**

**ಹೇಳಬಾರದು? ಗ್ರಂಥಗಳ ಹೆಸರುಗಳು ‘ಪ್ರಥಮ’, ‘ಅಂತಿಮ’ ಎಂದು ಇರುವುದರಿಂದ ಭಗವದ್ಗೀತೆ ಪುರಾತನವಾದ ಎತ್ತಿನ ಗಾಡಿಯಂತಹದ್ದು. ಕೊನೆಯಲ್ಲಿ ಹೊಸದಾಗಿ ಬಂದಿರುವ ಖುರ್‌ಆನ್ ಗ್ರಂಥವು ಹೊಸ ಕಾರಿನಂತಹದ್ದು. ಹಳೆ ಎತ್ತಿನಗಾಡಿಗೂ ಹೊಸ ಕಾರಿಗೂ ಎಷ್ಟು ವ್ಯತ್ಯಾಸವಿರುತ್ತದೋ ಅಷ್ಟೇ ವ್ಯತ್ಯಾಸ ಭಗವದ್ಗೀತೆಗೂ ಖುರ್‌ಆನ್‌ಗೂ ಇದೆಯೆಂದು ನಾವು ಹೇಳುತ್ತಿದ್ದೇವೆ. ಹೊಸದಾಗಿ ಬಂದಿರುವ ಕಾರಲ್ಲಿ ಪ್ರಯಾಣಿಸುವುದು ಸುಲಭ ಮತ್ತು ಸಂತೋಷ. ಹಳೆ ಎತ್ತಿನಗಾಡಿಯಲ್ಲಿ ಒಂದು ವರ್ಷಕ್ಕೆ ಹೋಗುವ ದೂರವನ್ನು ಹೊಸಕಾರಿನಲ್ಲಿ ಕೆಲವು ಗಂಟೆಗಳಲ್ಲಿ ಹೋಗಬಹುದು. ಆದ್ದರಿಂದ ಹಳೆ ಕಾಲದಲ್ಲಿನ ಭಗವದ್ಗೀತೆಯನ್ನು ಬಿಟ್ಟು ಈ ಮಧ್ಯಕಾಲದಲ್ಲಿ ಕೊನೆಯದಾಗಿ ಬಂದಿರುವ ಖುರ್‌ಆನ್‌ನನ್ನು ಆಶ್ರಯಿಸಿ ಇಸ್ಲಾಮ್ ಪ್ರಕಾರ ನಡೆಯುವುದರಿಂದ ದೇವರು ಒಪ್ಪಿಕೊಳ್ಳುವನು. ದೇವರ ಮಾರ್ಗದಲ್ಲಿ ನಡೆದಂತಾಗುತ್ತದೆಂದು ನಾನು ಅಂದುಕೊಳ್ಳುತ್ತಿದ್ದೇನೆ. ನಾನೇ ಅಲ್ಲದೆ ಬಹಳ ಜನ ಇಸ್ಲಾಮ್ ಹಿರಿಯರು, ಇಸ್ಲಾಮ್ ಸಂಸ್ಥೆಗಳನ್ನು ನಡೆಸುವವರು “ಹಳೆ ಭಗವದ್ಗೀತೆಯನ್ನು ಬಿಡಿ, ನವೀನವಾಗಿ ಬಂದಿರುವ ಖುರ್‌ಆನ್‌ನನ್ನು ನಂಬಿಕೊಳ್ಳಿ, ಅಲ್ಲಾನನ್ನು ಆರಾಧಿಸಿರಿ” ಎಂದು ಹೇಳುತ್ತಿದ್ದಾರೆ. ನೀವೇನೋ ಮೂರು ಗ್ರಂಥಗಳ ಜ್ಞಾನ ಒಂದೇ ಎನ್ನುತ್ತಿದ್ದೀರ. ನಿಮ್ಮ ಮಾತು ನಿಜವಾ? ಅವರ ಮಾತು ನಿಜವಾ? ಯಾರ ಮಾತನ್ನು ನಂಬಬೇಕು?**

**ಉತ್ತರ :-** ನನ್ನನ್ನು ಕೇಳಿದರೇ ನನ್ನ ಮಾತನ್ನು ಕೇಳಿ ಎಂದು ಹೇಳುತ್ತೇವೆ. ಒಂದುವೇಳೆ ಅವರನ್ನು ಕೇಳಿದರೇ ಅವರ ಮಾತನ್ನೇ ನಂಬಿರೆನ್ನುತ್ತಾರೆ. ಹಾಗೆ ಕೇಳಿದರೇ ಆ ಸಮಸ್ಯೆ ತೀರುವುದಿಲ್ಲ. ನಾನು ಹೇಳುವ ಮಾತು ಸರಿಯಾಗಿರುವು ದೆಂದು ಯಾರಿಗೆ ಅವರು ಅನ್ನುವುದು ಸಹಜ. ಹಾಗಲ್ಲದೆ ಶಾಸ್ತ್ರಬದ್ಧತೆ ಯಾವುದರಲ್ಲಿ ಇದೆಯೋ ಗಮನಿಸಿ ಅದನ್ನೇ ನಂಬುವುದು ಒಳ್ಳೆಯದು. ದೇವರು ಹೇಳಿದ ಜ್ಞಾನ ಎಲ್ಲರಿಗೂ ಸಮಾನವಾಗಿಯೇ ಇರುತ್ತದೆ ಆದರೇ ಹೆಚ್ಚು ಕಡಿಮೆಗಳಾಗಲೀ, ಉಚ್ಛನೀಚಗಳಾಗಿಯಾಗಲೀ ಇರುವುದಿಲ್ಲ. ಹಿಂದೂ ಗಳು ‘ಪರಮಾತ್ಮ’ ಎಂದರೂ, ಮುಸ್ಲಿಮ್‌ರು ‘ಅಲ್ಲಾ’ ಎಂದರೂ, ಕರೆಯಲಾಗುವ

ಹೆಸರುಗಳು ಬೇರೆಯಾದರೂ ದೇವರು ಒಬ್ಬನೇ ಎಂದು ಹೇಳಬಹುದು. ಭಾಷೆ ಬೇರೆಯಾದರೂ ಭಾವ ಒಂದೇ ಇರುತ್ತದೆ. ತೆಲುಗು ಭಾಷೆಯಲ್ಲಿ 'ಭೋಜನ' ಎಂದರೂ, ತಮಿಳ ಭಾಷೆಯಲ್ಲಿ 'ಸಾಪಾಡು' ಎಂದರೂ, ಹಿಂದೀಯಲ್ಲಿ 'ಖಾನಾ' ಎಂದರೂ, ಕನ್ನಡದಲ್ಲಿ 'ಊಟ' ಎಂದರೂ ಎಲ್ಲ ಭಾಷೆಗಳು ಒಂದು ತಿನ್ನುವ ಆಹಾರವನ್ನೇ ಅನ್ನುತ್ತಿದ್ದೇವೆ. ಭಾಷೆಗಳು ಬೇರೆಯಾದರೂ ಭಾವದಲ್ಲಿ ಉದ್ದೇಶ ಒಂದೇಯಾಗಿರುವುದರಿಂದ ಹಿಂದೂಗಳು 'ಪರಮಾತ್ಮ' ಎಂದರೂ, ಮುಸ್ಲಿಮ್‌ರು 'ಅಲ್ಲಾ' ಎಂದರೂ ಎರಡು ಮಾತುಗಳೂ ದೇವರನ್ನು ಕುರಿತು ಹೇಳಿರುವವೇ ಆಗುತ್ತವೆ.

ದೇವರು "ವಹೀಯಿಂದ ಜ್ಞಾನವನ್ನು ಹೇಳಲಾಗುತ್ತದೆ" ಎಂದು ಹೇಳಿದಾಗ ಆಕಾಶವಾಣಿಯಿಂದ ಬಂದಿರುವ ಶಬ್ಧದಲ್ಲಿಯೇ ಜ್ಞಾನ ತಿಳಿದಿದೆ ಯೆಂದು ಅರ್ಥವಾಗುತ್ತಿದೆ. ಹೇಳಿದ ಜ್ಞಾನ ಒಂದೇ, ಹೇಳಿದವನು ಒಬ್ಬನೇ ಆಗಿರುವಾಗ ಅದನ್ನೇ ಎರಡು ಬಾರಿ ಹೇಳಿಕೊಂಡು, ಎರಡು ಹೆಸರುಗಳನ್ನಿಟ್ಟು ಕೊಂಡು ಒಂದು ಹಳೆಯ ಗಾಡಿ ಮತ್ತೊಂದು ಹೊಸ ಗಾಡಿ ಎಂದು ಮನುಷ್ಯರು ಅನ್ನುತ್ತಿದ್ದಾರೆ ಹೊರತು ಜ್ಞಾನವನ್ನು ಹೇಳಿದ ದೇವರು ಹಳುಬನು ಮತ್ತು ಹೊಸಬನು ಎಂದು ಎಲ್ಲಿಯೂ ಹೇಳಲಿಲ್ಲವಲ್ಲವೆ! ಮನುಷ್ಯರ ಮಾತುಗಳನ್ನು ನಂಬಬೇಡ ದೇವರ ಮಾತನ್ನೇ ನಂಬು ಎಂದು ಜ್ಞಾನ ತಿಳಿದ ಯಾರಾದರೂ ಹೇಳಬಲ್ಲರು. ದೇವರು ತನ್ನ ಜ್ಞಾನವನ್ನು ಸೃಷ್ಠಿ ಆದಿಯಲ್ಲೇ ವಹೀಯಿಂದ ಹೇಳಿದಾಗ ಎಂದಿಗೂ ಒಂದೇ ಇರುತ್ತದಲ್ಲವೆ! ಅದನ್ನು ಎಷ್ಟು ಗ್ರಂಥಗಳಾಗಿ ಬರೆದರೂ ಮೊದಲು ಹೇಳಿರುವುದು ಹಳೆಯದು, ಹಿಂದೆ ಹೇಳಿರುವುದು ಹೊಸದು ಎಂದು ಹೇಳುವುದಕ್ಕೆ ಅವಕಾಶವೇ ಇಲ್ಲ. ಐದು ಸಾವಿರ ವರ್ಷಗಳ ಪೂರ್ವದಲ್ಲಿ ದೇವರು ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಭಗವದ್ಗೀತೆಯಾಗಿ ಹೇಳಿದ್ದಾರೆ. ನಂತರ ಅದನ್ನೇ ಖುರ್‌ಆನ್ ಗ್ರಂಥವಾಗಿ ಹೇಳಿದ್ದಾರೆ. ಕೊನೆಯಲ್ಲಿ ಹೇಳಿದ ಖುರ್‌ಆನ್ ಗ್ರಂಥದಲ್ಲಿ **"ಮೊದಲು ಹೇಳಿದ ಗ್ರಂಥಗಳನ್ನು ಖುರಾನ್ ಧೃಢೀಕರಿಸುತ್ತಿದೆ"** ಎಂದು ಹೇಳಲಾಗಿದೆ. ಆಗ ಮೊದಲು ಹೇಳಿರುವ ಗ್ರಂಥಗಳಲ್ಲಿನ

ಜ್ಞಾನ, ಈಗ ಬಂದಿರುವ ಖುರಾನ್‌ನಲ್ಲಿರುವ ಜ್ಞಾನ ಎರಡೂ ಒಂದೇಯೆಂದು ಖುರಾನ್ ಗ್ರಂಥದಲ್ಲಿಯೇ ಐದನೇ ಸೂರಾದಲ್ಲಿ ಅನೇಕ ಕಡೆ ಇದೆ. ಹಾಗಿರುವಾಗ ಭಗವದ್ಗೀತೆ ಹಳೆದು, ಖುರ್‌ಆನ್ ಹೊಸದು ಎನ್ನುವುದು ದೇವರ ಮಾತು ಅಲ್ಲವೆಂದು ಹೇಳಬಹುದು.

ಭೂಮಿ ಮೇಲೆ ಮೊದಲು ತಯಾರಾದ ಗ್ರಂಥ "ಭಗವದ್ಗೀತೆ". ಭೂಮಿಯ ಮೇಲೆ ಮೊದಲು ಹೇಳಲಾಗಿರುವ ಜ್ಞಾನ "ಜಪರ". ಜಪರ ಜ್ಞಾನವೇ ಗ್ರಂಥರೂಪವಾದಾಗ ಅದನ್ನು ಪ್ರಥಮ ದೈವಗ್ರಂಥವೆಂದು ಹೇಳುತ್ತಿದ್ದೇವೆ. ನಂತರ ತಯಾರಾಗಿರುವುದು ಇಂಜೀಲ್ ಗ್ರಂಥ. ಇಂಜೀಲ್ ಗ್ರಂಥವನ್ನು ಬೈಬಲ್ ಆಗಿ ಹೇಳಿಕೊಳ್ಳುತ್ತಿದ್ದೇವೆ. ಆ ನಂತರ ಕೊನೆಯದಾಗಿ ತಯಾರಾದ ಗ್ರಂಥ ಖುರ್‌ಆನ್ ಗ್ರಂಥ. ಅದನ್ನೇ ಅಂತಿಮ ದೈವಗ್ರಂಥವೆಂದು ಕರೆಯುತ್ತಿದ್ದೇವೆ. ಅಂತಿಮ ದೈವ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ತೌರಾತ್, ಇಂಜೀಲ್ ಗ್ರಂಥಗಳಲ್ಲಿನ ಜ್ಞಾನವೇ ಖುರಾನ್‌ನಲ್ಲಿ ಇದೆಯೆನ್ನುವಂತೆ ಆ ಎರಡು ಗ್ರಂಥಗಳನ್ನು ಧೃಢೀಕರಿಸುತ್ತಿದ್ದೇನೆಂಬ ವಾಕ್ಯಗಳು ಖುರ್‌ಆನ್‌ನಲ್ಲಿ ಇವೆ. ತೌರಾತ್ ಗ್ರಂಥಯಾವುದಾದರೇ ಇಲ್ಲಿ ಹೇಳಲಾಗಿದೆಯೋ, ಅದೇ ಭಗವದ್ಗೀತೆ ಎಂದು ಯಾರಿಗೂ ತಿಳಿದಿಲ್ಲ. ಇಂಜೀಲನ್ನು, ಖುರಾನನ್ನು ನೋಡಿದ ಮುಸ್ಲಿಮ್‌ರು ಈದಿನ ಇದ್ದಾರಾಗಲೀ, ತೌರಾತ್‌ನ್ನು ನೋಡಿದ ಮುಸ್ಲಿಮ್‌ರು ಇಲ್ಲವೆಂದು ಹೇಳಬಹುದು. ನಮ್ಮ ಮುಂದಿರುವ ಭಗವದ್ಗೀತೆಯೇ ತೌರಾತ್ ಗ್ರಂಥವೆಂದು ನಾವು ಈದಿನ ಹೇಳಿದರೇ ಅದನ್ನು ನಂಬಲಾರದವರು "ತೌರಾತ್ ಭಗವದ್ಗೀತೆ ಒಂದಲ್ಲ. ತೌರಾತ್‌ನ್ನು ಹೇಳಿದ ಪ್ರವಕ್ತ (ಪ್ರವಾದಿ) ಬೇರೆ ಭಗವದ್ಗೀತೆಯನ್ನು ಹೇಳಿದ ಪ್ರವಕ್ತ ಬೇರೆ" ಎಂದು ಹೇಳುತ್ತಿದ್ದಾರೆ. ಈ ವಿಷಯವನ್ನು ಕುರಿತು ನಂತರ ಪ್ರಸ್ತಾಪಿಸುತ್ತೇವೆ. ಈಗ ಹೇಳಿರುವುದು ಏನೆಂದರೇ! ಖುರಾನನ್ನು ಕಾರಿನೊಂದಿಗೆ ಹೋಲಿಸಿ ಹೇಳಿದವರು ಖುರಾನ್ ಗ್ರಂಥದಲ್ಲಿನ ಜ್ಞಾನ ಎಲ್ಲಿಂದ ಬಂದಿದೆಯೋ ತಿಳಿಯಬೇಕು. ಖುರಾನ್‌ಗಾಗಲೀ, ಭಗವದ್ಗೀತೆಗಾಗಲೀ ಆಧಾರವಾದ ಜ್ಞಾನವು 'ಜಪರ ಅಥವಾ ಜಬುರ' ಆದಾಗ

ಭಗವದ್ಗೀತೆಯಲ್ಲಿನ ಜ್ಞಾನವೇ ಖುರ್‌ಆನ್‌ನಲ್ಲಿಯೂ, ಖುರ್‌ಆನ್‌ನಲ್ಲಿನ ಜ್ಞಾನವೇ ಭಗವದ್ಗೀತೆ ಯಲ್ಲಿಯೂ ಇದೆಯೆಂದು ಏಕೆ ಹೇಳಬಾರದು? ಸೃಷ್ಠಿ ಆದಿಯಲ್ಲಿ ವಹೀಯಿಂದ ಹೇಳಲಾಗಿರುವ ಜ್ಞಾನವೇ ಭಗವದ್ಗೀತೆಯಲ್ಲಿಯೂ, ಖುರ್‌ಆನ್ ಗ್ರಂಥದಲ್ಲಿಯೂ ಇರುವಾಗ ಅದು ಬೇರೆ, ಇದು ಬೇರೆ ಎಂದು ಹೇಳುವುದು ತಪ್ಪಾಗುತ್ತದೆ. ದೇವರ ಜ್ಞಾನವನ್ನು ಅವಮಾನಿಸಿದಂತಾಗುತ್ತದೆ.

**ಪ್ರಶ್ನೆ :– ಖುರ್‌ಆನ್ ಗ್ರಂಥ ಮುಹಮ್ಮದ್ ಪ್ರವಕ್ತರಿಂದ ಹೊರಗೆ ಬಂದಿದೆ. ಅದನ್ನು ಪ್ರವಕ್ತರವರಿಗೆ ಹೇಳಿರುವುದು ಜಿಬ್ರಯೇಲ್. ಹಾಗಿರುವಾಗ ವಹೀಯಿಂದ ಬಂದಿರುವ ಜ್ಞಾನವೆಂದು ನೀವು ಹೇಗೆ ಹೇಳುತ್ತೀರ? ಜಿಬ್ರಯೇಲ್ ದೇವರು ಕಳುಹಿಸಿದಾಗ ಬಂದಿರುವ ದೂತ. ದೇವದೂತನಾದ ಜಿಬ್ರಯೇಲ್ ಹೇಳಿರುವುದು ಖುರಾನ್ ಗ್ರಂಥವೆಂದು, ವಹೀಯಿಂದ ಬಂದಿರುವುದಲ್ಲವೆಂದು ದೂತನಿಂದ ಬಂದಿರುವುದೆಂದು ಹೇಳುತ್ತಿದ್ದೇವೆ. ಇದಕ್ಕೆ ನೀವೇನು ಹೇಳುತ್ತೀರ?**

**ಉತ್ತರ :–** ಆದರೇ ಪೂರ್ತಿ ವಿವರವಾಗಿ ನಿನಗೆ ಹೇಳಿದರೇನೆ ಅರ್ಥವಾಗುತ್ತ ದೆಂದು ನನಗೆ ಅರ್ಥವಾಗಿದೆ. ಮೊದಲು ಜಿಬ್ರಯೇಲ್ ದೇವದೂತನಲ್ಲ. ಆ ವಿಷಯ ಖುರಾನ್‌ನಲ್ಲಿಯೇ ಐದು ಮತ್ತು ಆರು ಆಯತ್‌ಗಳಲ್ಲಿ ಇದೆ. ಜಿಬ್ರಯೇಲ್ ನಂಬುವಂತಹ ಆತ್ಮ ಎಂದು, ದೂತ ಅಲ್ಲವೆಂದು ಹೇಳಿದ ಖುರ್‌ಆನ್ ವಾಕ್ಯಗಳನ್ನು ಅನುಸರಿಸಿ ನಾವು ಆ ಮಾತನ್ನು ಹೇಳುತ್ತಿದ್ದೇವೆ. ಖುರ್‌ಆನ್ ಗ್ರಂಥದಲ್ಲಿ ಬರೆದ ವಾಕ್ಯಗಳನ್ನು ನೋಡಿದರೇ ಜಿಬ್ರಯೇಲ್ ದೂತ ಅಲ್ಲವೆಂದು, ಆತನು ಒಂದು ಆತ್ಮ ಎಂದು ತಿಳಿಯಬಲ್ಲದು. ಆದ್ದರಿಂದ ಈಗ ಖುರ್‌ಆನ್‌ನಲ್ಲಿನ ಕೆಲವು ವಾಕ್ಯಗಳನ್ನು ನೋಡೋಣ.

2ನೇ ಸೂರಾ, 97 ನೇ ಆಯತ್ (2–97) **"ಓ ಪ್ರವಕ್ತಾ! ಅವರಿಗೆ ಹೇಳು ಜಿಬ್ರಯೇಲ್‌ಗೆ ಶತ್ರುವಾದ ಪ್ರತಿಯೊಬ್ಬನು ಅಲ್ಲಾಹ್‌ಗೇ ಶತ್ರುವಾಗಿದ್ದಾನೆಂದು ಗ್ರಹಿಸಬೇಕು. ಏಕೆಂದರೇ ಅಲ್ಲಾಹ್ ಸೂಚನೆಗಳ ಮೇಲೆಯೇ ಆತನು ನಿಮ್ಮ ಹೃದಯದಮೇಲೆ ಈ ಸಂದೇಶವನ್ನು ಅವತರಿಸುವಂತೆ ಮಾಡಿದ್ದಾನೆ. ಈ**

**ಖುರ್‌ಆನ್ ತನಗೆ ಪೂರ್ವದಲ್ಲಿ ಬಂದಿರುವ ಗ್ರಂಥಗಳನ್ನು ಧೃಢೀಕರಿಸುತ್ತದೆ. ವಿಶ್ವಾಸಿಸುವವರಿಗೆ ಶುಭವಾರ್ತೆಯನ್ನು ಕೊಡುತ್ತದೆ".**

2ನೇ ಸೂರಾ,98ನೇ ಆಯತ್ (2–98) **"ಯಾರು ದೇವರಿಗೂ, ಆತನ ದೂತರಿಗೂ, ಆತನ ಪ್ರವಕ್ತರಿಗೂ, ಜಿಬ್ರಯೇಲ್‌ಗೂ ಮತ್ತೂ ಮೀಕಾಯಿಲ್‌ಗೂ ಶತ್ರುಗಳಾಗಿ ಇರುತ್ತಾರೋ ಅಂತಹ ಅವಿಶ್ವಾಸಿಗಳಿಗೆ ಅಲ್ಲಾಹ್ ಶತ್ರುವಾಗಿ ಇರುತ್ತಾನೆ".**

26ನೇ ಸೂರಾ, 193ನೇ ಆಯತ್ (26–193) **"ಈ ಖುರ್‌ಆನ್‌ನನ್ನು "ರೂಹುಲ್ ಅಮೀನ್" (ನಂಬುವಂತಹ ಆತ್ಮ) ಅವತರಿಸುವಂತೆ ಮಾಡಿದ್ದಾನೆ" ಎಂದು ಇದೆ.**

70ನೇ ಸೂರಾ, 4ನೇ ಆಯತ್ (70–4) **"ಐವತ್ತು ಸಾವಿರ ವರ್ಷಗಳೊಂದಿಗೆ ಸಮಾನ ಪರಿಮಾಣವಿರುವ ದಿನದಂದು ದೈವದೂತರು ಮತ್ತು ಜಿಬ್ರಯೇಲ್ ದೇವರ ಕಡೆಗೆ ಅಧಿರೋಹಿಸುತ್ತಾರೆ"**

78ನೇ ಸೂರಾ, 38ನೇ ಆಯತ್ (78–38) **"ಯಾವ ದಿನದಂದು ಆತ್ಮ (ಜಿಬ್ರಯೇಲ್) ಮತ್ತು ದೇವದೂತರು ಸಾಲುಸಾಲಾಗಿ ನಿಂತಿರುತ್ತಾರೋ, ಆ ದಿನ ಕರುಣಾಮಯನ ಅನುಮತಿ ಹೊಂದಿರುವವನು ಹೊರತು ಯಾರೂ ಮಾತನಾಡುವುದಿಲ್ಲ. ಮಾತನಾಡಿದವನು ಸರಿಯಾದ ಮಾತನ್ನೇ ಮಾತನಾಡುತ್ತಾನೆ".**

97ನೇ ಸೂರಾ, 4ನೇ ಆಯತ್ (97–4) **"ಆ ರಾತ್ರಿಯಲ್ಲಿ ದೈವದೂತರು ಮತ್ತು ಆತ್ಮ (ಜಿಬ್ರಯೇಲ್) ತಮ್ಮ ಪ್ರಭುವಿನ ಜಾರಿಗಳ ಮೇಲೆ ಸಮಸ್ತ ವಿಷಯಗಳ ನಿರ್ವಹಣೆಯ ನಿಮಿತ್ತ ಆಕಾಶದಿಂದ ಭೂಮಿಗೆ ಇಳಿದು ಬರುತ್ತಾರೆ".**

ಮೇಲೆ ಹೇಳಿರುವ ಖುರ್‌ಆನ್ ಗ್ರಂಥದಲ್ಲಿನ ಆಯತ್‌ಗಳಲ್ಲಿ ಜಿಬ್ರಯೇಲ್ ದೂತ ಅಲ್ಲವೆಂದು, ಆತ್ಮ ಎಂದು, ನಂಬುವಂತಹ ಆತ್ಮ ಎಂದು ಹೇಳಲಾಗಿದೆ. ಒಂದೇ ವಾಕ್ಯದಲ್ಲೇ ದೂತರನ್ನು ಜಿಬ್ರಯೇಲ್‌ನನ್ನು ಬಿಡಿಬಿಡಿ

ಯಾಗಿ ಹೇಳಲಾಗಿದೆ. ಜಿಬ್ರಯೇಲ್‌ನನ್ನು ದೂತಯೆಂದು ಎಲ್ಲಿಯೂ ಹೇಳಲಿಲ್ಲ. ಹಾಗಿರುವಾಗ ಮನುಷ್ಯರು ಜಿಬ್ರಯೇಲ್‌ನನ್ನು ದೂತ ಎನ್ನುವುದು ತಪ್ಪಾಗುತ್ತದೆ. ಜಿಬ್ರಯೇಲ್ ಆತ್ಮವೇ ಹೊರತು, ದೂತನಲ್ಲವೆಂದು ಹೇಳಿದಂತೆ ತಿಳಿಯುವು ದರಿಂದ ಜಿಬ್ರಯೇಲ್‌ನನ್ನು 'ದೇವರು ಕಳಿಸಿರುವಾಗ ಬಂದಿರುವ ದೂತ' ಎಂದು ಅನ್ನಬಾರದು.

**ಪ್ರಶ್ನೆ :- ಭಗವದ್ಗೀತೆಯನ್ನು ಪ್ರಥಮ ದೈವಗ್ರಂಥವೆಂದು, ಇಂಜೀಲ್ ಗ್ರಂಥವನ್ನು ದ್ವಿತೀಯ ದೈವಗ್ರಂಥವೆಂದು, ಖುರ್‌ಆನ್ ಗ್ರಂಥವನ್ನು ಅಂತಿಮ ದೈವಗ್ರಂಥವೆಂದು ಎಲ್ಲರೂ ಅನ್ನುತ್ತಿದ್ದಾರೆ. ಭಗವದ್ಗೀತೆಯನ್ನು ಪ್ರಥಮ ದೈವ ಗ್ರಂಥವೆಂದು, ಖುರ್‌ಆನ್‌ನನ್ನು ಅಂತಿಮ ದೈವಗ್ರಂಥವೆಂದು ಏಕೆ ಅನ್ನುತ್ತಿದ್ದಾರೆ? ಇದಕ್ಕೆ ಶಾಸ್ತ್ರಬದ್ಧವಾದ ಆಧಾರ ಏನಾದರೂ ಇದೆಯಾ! ಎಂದು ಕೇಳುತ್ತಿದ್ದೇನೆ. ಸರಿಯಾದ ಸಮಾಧಾನವಿದ್ದರೇ ವಿವರವಾಗಿ ಹೇಳಿ.**

**ಉತ್ತರ :-** ಯಾವ ಪ್ರಶ್ನೆಯನ್ನಾದರೂ ಸುಮ್ಮನೇ ಕೇಳಬಾರದು. ಕೇಳುವ ಉತ್ತರವನ್ನೂ ಸಹ ಶ್ರದ್ಧೆಯಿಂದ ಕೇಳಬೇಕು. ಕೇಳಿದ ಉತ್ತರ ನಿಮಗೂ ನಿಮ್ಮ ಉದ್ದೇಶಕ್ಕೂ ಒಪ್ಪಿಗೆಯಾಗುವಂತಿರಬೇಕೆಂದು ಅಂದುಕೊಳ್ಳಬಾರದು. ಕೇಳುವ ವರಿಗೆ ಒಪ್ಪಿಗೆಯಾದರೂ, ಆಗದಿದ್ದರೂ ಹೇಳಿದ ಉತ್ತರ ಶಾಸ್ತ್ರಬದ್ಧ ವಾಗಿರುವುದೋ ಅಲ್ಲವೋ ಎಂದು ನೋಡಬೇಕು. ಶಾಸ್ತ್ರಬದ್ಧವಾದು ದಾದರೇ ಅದನ್ನು ನಂಬಬಹುದು. ಶಾಸ್ತ್ರಬದ್ಧವಲ್ಲದಿರುವುದನ್ನು ಅಸತ್ಯವೆಂದು ತಿಳಿದು ಬಿಟ್ಟುಹಾಕಬೇಕು. ಖುರ್‌ಆನ್ ಗ್ರಂಥವನ್ನು ಕುರಿತು, ಭಗವದ್ಗೀತೆಯನ್ನು ಕುರಿತು ಗತದಲ್ಲಿ ಅಂದರೆ ಸೃಷ್ಠಿ ಆದಿಯಲ್ಲಿ ನಡೆದ ವಿಷಯಗಳನ್ನು ತಿಳಿದುಕೊಂಡರೆ ಸತ್ಯ ತಿಳಿಯುತ್ತದೆಂದು ಮೊದಲಿನಿಂದ ಹೇಳುತ್ತಿದ್ದೇನೆ ಕೇಳಿರಿ.

**ಪ್ರಶ್ನೆ :- ಸೂರ್ಯನು ದಕ್ಷಿಣ ಭಾರತದೇಶದಲ್ಲಿರುವ ಮನುವು ಎಂಬ ವ್ಯಕ್ತಿಗೆ ತೆಲುಗು ಭಾಷೆಯಲ್ಲಿಯೇ ಜ್ಞಾನವನ್ನು ಹೇಳಿದ್ದಾನೆಂದು ನೀವು ಹೇಳಿದ್ದೀರ. ಭೂಮಿಮೇಲಿರುವ ಮನುವಿಗೆ ತೆಲುಗು ಭಾಷೆ ಬಂದಿರಬಹುದು. ಆದರೇ ತೆಲುಗು**

**ಭಾಷೆಯಲ್ಲೇ ಹೇಳುವುದಕ್ಕೆ ಸೂರ್ಯನು ತೆಲುಗಿನವನಲ್ಲ ಅಲ್ಲವೆ! ಎಲ್ಲೋ ಆಕಾಶದಲ್ಲಿ ಭೂಮಿಯಿಂದ 14 ಕೋಟಿ, 95 ಲಕ್ಷ, 97 ಸಾವಿರ, 870 ಕಿಲೋಮೀಟರ್‌ಗಳ ದೂರದಲ್ಲಿ (14,95,97,870 km) ಇರುವ ಸೂರ್ಯನು ತೆಲುಗು ಭಾಷೆಯನ್ನು ಹೇಗೆ ಮಾತನಾಡಿದ್ದಾನೆ? ಎಂಬ ಪ್ರಶ್ನೆ ಯಾರಿಗಾದರೂ ಬರಬಹುದು. ಅದೇ ನನಗೂ ಸಹ ಬಂದಿದೆ. ಸೂರ್ಯ ಗ್ರಹ ತೆಲುಗು ಮಾತನಾಡಿದೆ ಎನ್ನುವುದಕ್ಕೆ ಇನ್ನೂ ಯಾವುದಾದರೂ ಆಧಾರವಿದೆಯಾ ಎಂದು ಕೇಳುತ್ತಿದ್ದೇವೆ?**

**ಉತ್ತರ :–** ಎರಡನೆಯ ಬಾರಿ ನಡೆದಿರುವುದಕ್ಕೆ ಮೊದಲಬಾರಿ ನಡೆದಿರುವುದು ಆಧಾರವಾಗಿ ಇರಬಹುದು. ಮೊದಲು ನಡೆದಿರುವುದನ್ನು ಉದಾಹರಣೆಯಾಗಿ ತೋರಿಸಿ ಎರಡನೆಯದು ಹೀಗೆ ಇದೆಯೆಂದು ಹೇಳಬಹುದು. ಹಾಗಲ್ಲದೆ ಮೊದಲು ನಡೆದಿರುವುದಕ್ಕೆ ಆಧಾರ ಬೇಕೆಂದರೇ ಅದಕ್ಕೆ ಅದೇ ಆಧಾರವಾಗುತ್ತದೆ. ಅಷ್ಟೇ ಹೊರತು ಉಳಿದ ಆಧಾರಗಳಾವುವೂ ಅದಕ್ಕೆ ಇರುವುದಿಲ್ಲ. ಅದೇ ರೀತಿ ಭೂಮಿಯ ಮೇಲೆ ಸೂರ್ಯನು ಮಾತನಾಡಿರುವುದೇ ಮೊದಲ ಸಂಘಟನೆ ಆದಾಗ ಅದಕ್ಕೆ ಅದೇ ಆಧಾರವಾಗಲೀ, ಬೇರೇ ಯಾವುದನ್ನೂ ಆಧಾರವಾಗಿ ತೋರಿಸಲಾರೆವು. ಮೊದಲನೆಯದು ಯಾವುದಾದರೂ ನಂತರ ಅದಕ್ಕೆ ಆಧಾರವಾಗುತ್ತದೆ. ಆದ್ದರಿಂದ ಸೂರ್ಯನು ತೆಲುಗು ಭಾಷೆಯಲ್ಲಿ ಮಾತ ನಾಡಿರುವುದಕ್ಕೆ ಎರಡನೆಯ ಆಧಾರ ಯಾವುದೂ ಇಲ್ಲ. ಅದಕ್ಕೆ ಅದೇ ಆಧಾರ. ಆದರೇ ಈ ವಿಷಯವಾಗಿ ಸ್ವಲ್ಪ ವಿವರಣೆಯನ್ನು ಕೊಡಬಲ್ಲೆವು. ಸೂರ್ಯನು ಗ್ರಹಗಳಲ್ಲಿ ಮಹಾಗ್ರಹ. ಎಂದರೇ ದೊಡ್ಡ ಗ್ರಹ ಎಂದು ಅರ್ಥ. ಸೂರ್ಯನು ದೊಡ್ಡ ಗ್ರಹವಾದ್ದರಿಂದ ಯಾವ ಭಾವವನ್ನಾದರೂ ಗ್ರಹಿಸಬಲ್ಲನು. "ಗ್ರಹ" ಎಂದರೇ ಗ್ರಹಿಸುವುದೆಂದು ಅರ್ಥವಿರುವುದರಿಂದ ಯಾವ ಭಾಷೆಯನ್ನಾದರೂ ಗ್ರಹಿಸಬಲ್ಲನು. ಹಾಗೆಯೇ ಯಾವ ಭಾಷೆಯಲ್ಲಾದರೂ ತನ್ನ ಭಾವವನ್ನು ವ್ಯಕ್ತ ಪಡಿಸಬಲ್ಲನು.

ಆ ಕಾಲದಲ್ಲಿ ಪ್ರಪಂಚದಲ್ಲಿ ಮೊಟ್ಟಮೊದಲು ತಯಾರಾದ ಭಾಷೆ **'ತೆಲುಗು ಭಾಷೆ'**. ಪ್ರಪಂಚವೆಲ್ಲಾ ಮೊದಲು ಮಾತನಾಡಿದ ಭಾಷೆ 'ತೆಲುಗುಭಾಷೆ'.

ಮೊದಲು ಜ್ಞಾನ ತಿಳಿದಿರುವುದು ತೆಲುಗು ಭಾಷೆಯಲ್ಲಾಗಿರುವುದರಿಂದ ಎಲ್ಲದಕ್ಕಿಂತ ತೆಲುಗು ಭಾಷೆ ದೊಡ್ಡದೆಂದು, ಮೊದಲನೆಯದೆಂದು ಹೇಳಬಹುದು. ಭೂಮಿ ಮೇಲೆ ಮೊದಲು ಭಾಷೆ ತಯಾರಾಗಿದೆ ಆದರೇ, ಅದು ಹೆಸರಿಲ್ಲದ ಭಾಷೆಯಂತೆ ಇತ್ತು. ಭಾವವನ್ನು ವ್ಯಕ್ತ ಮಾಡುವುದು ಭಾಷೆ ಎಂದು ಮಾತ್ರ ಎಲ್ಲರಿಗೂ ತಿಳಿದಿದೆ. ಸೂರ್ಯನು ತನ್ನ ಸ್ಥೂಲಶರೀರವನ್ನು ಆಕಾಶದಲ್ಲೇ ಬಿಟ್ಟು ಸುಮಾರು 15 ಕೋಟಿ ಕಿಲೋಮೀಟರ್‌ಗಳ ದೂರದಲ್ಲಿರುವ ಭೂಮಿ ಮೇಲೆ ಬಂದು, ಭೂಮಿಮೇಲೆ ದಕ್ಷಿಣ ಭಾರತದೇಶದಲ್ಲಿರುವ ಮನುವು ಎಂಬ ವ್ಯಕ್ತಿಗೆ ಜ್ಞಾನವನ್ನು ಬೋಧಿಸುವುದು ನಡೆದಿದೆ. ಹಾಗೆ ಬೋಧಿಸಿದಾಗ ಸೂರ್ಯನು ಒಂದು ಗಂಟೆಯಲ್ಲೋ, ಒಂದು ದಿನದಲ್ಲೋ ಜ್ಞಾನವನ್ನು ಹೇಳಿ ಹೋಗಲಿಲ್ಲ. ವಾಸ್ತವ ಹೇಳಿದರೇ ಮನುವಿಗೆ ಸೂರ್ಯನು ಜ್ಞಾನವನ್ನು ಹೇಳಿದ್ದಾನೆಂಬ ವಿಷಯವೇ ತಿಳಿದಿಲ್ಲ. ಜ್ಞಾನವನ್ನು ಹೇಳಿದ ಸೂರ್ಯನು ಯಾವ ಸಂದರ್ಭದಲ್ಲಾಗಲೀ ಜ್ಞಾನವನ್ನು ಹೇಳುವ ತಾನು ಸೂರ್ಯನೆಂದು ಹೇಳಲಿಲ್ಲ. ಯಾವುದೋ ಸೂಕ್ಷ್ಮವು ಜ್ಞಾನವನ್ನು ಹೇಳುತ್ತಿದೆಯೆಂದು ಮನುವು ಅಂದುಕೊಂಡಿದ್ದಾನೆ. ದ್ವಾಪರ ಯುಗದ ಕೊನೆಯಲ್ಲಿ ಕೃಷ್ಣನು ಭಗವದ್ಗೀತೆಯನ್ನು ಹೇಳಿದಾಗ ಮಾತ್ರವೇ ನಮಗೆ ಸೂರ್ಯನು ಮನುವಿಗೆ ಜ್ಞಾನ ಹೇಳಿದಂತೆ ತಿಳಿದಿದೆ. ಅಲ್ಲಿಯವರೆಗೂ ಮನುವಿಗಾಗಲೀ, ಆತನ ನಂತರ ಮನುಷ್ಯರಿಗಾಗಲೀ ಸೂರ್ಯನು ಭೂಮಿ ಮೇಲೆಗೆ ಬಂದು ಜ್ಞಾನ ಹೇಳಿದಂತೆ ತಿಳಿದಿಲ್ಲ. ಆದರೇ ಜ್ಞಾನ ಹೇಳಿರುವುದು ಸೂರ್ಯನೆಂದು ಮನುವಿಗೆ ತಿಳಿದಿದೆ ಎಂದು ಎಲ್ಲರೂ ಅಂದುಕೊಂಡಿದ್ದಾರೆ. ಎಲ್ಲರೂ ಅಂದುಕೊಂಡಂತೆ ಮನುವಿಗೆ ಸ್ವತಃವಾಗಿ ಸೂರ್ಯನೇ ಹೇಳಿದ್ದಾನೆಂಬ ವಿಷಯ ಆತನು ಸತ್ತುಹೋಗುವವರೆಗೂ ಆತನಿಗೂ ತಿಳಿದಿಲ್ಲ. ಕೃಷ್ಣನು ಹೇಳುವವರೆಗೂ ಯಾರಿಗೂ ತಿಳಿದಿಲ್ಲ.

ಮನುವಿಗಿಂತ ವಯಸ್ಸಿನಲ್ಲಿ ಎರಡು ಅಥವಾ ಮೂರು ವರ್ಷಗಳ ಚಿಕ್ಕವನಾದ ಸಾಧಾರಣ ವ್ಯಕ್ತಿಯೊಳಗೆ ಸೂರ್ಯನು ಪ್ರವೇಶಿಸಿ ಮನುವಿಗೆ ಜ್ಞಾನ ಹೇಳುವುದು ನಡೆದಿದೆ. ಕಾಣಿಸುವ ಮನುಷ್ಯನೊಳಗೆ ಜ್ಞಾನ ತಿಳಿದ

ಸೂಕ್ಷ್ಮವು ಪ್ರವೇಶಿಸಿ ಮಾತನಾಡುತ್ತಿದೆಯೆಂದು ಮನುವು ಅಂದುಕೊಳ್ಳುವುದರಿಂದ ಹೇಳುವವನು ಯಾರು? ಎಂಬ ಪ್ರಶ್ನೆಯೇ ಯಾರಿಗೂ ಬಂದಿಲ್ಲ. ತಾನು ಕೇಳಿದ ಜ್ಞಾನ ದೊಡ್ಡದೆಂದು ತಿಳಿದ ಮನುವು ಉತ್ತರ ದೇಶದಲ್ಲಿನ ಇಕ್ಷ್ವಾಕನೆಂಬ ರಾಜನಿಗೆ ಹೇಳುವುದು, ಆತನಿಂದ ಇತರರಿಗೆ ತಿಳಿಯಲಾಗಿದೆ. ಕೃತಯುಗದಲ್ಲಿ ಮನುವಿಗೆ ಜ್ಞಾನವನ್ನು ಸೂರ್ಯನು ಹೇಳಿದಾಗ, ಸೂರ್ಯನು ಹೇಳಿದ್ದಾನೆಂಬ ವಿಷಯ ಮೂರು ಯುಗಗಳು ಕಳೆಯುವವರೆಗೂ ಯಾರಿಗೂ ತಿಳಿದಿಲ್ಲ.

**ಪ್ರಶ್ನೆ :– ಯಾವಾಗಲೋ ಕೃತಯುಗದಲ್ಲಿ ಸೂರ್ಯನು ಮನುವಿಗೆ ಜ್ಞಾನವನ್ನು ಹೇಳಿದರೇ, ಆ ವಿಷಯ ಅಂದಿನ ಮನುವಿಗೇ ತಿಳಿಯದಿರುವಾಗ ಈಗ ಪ್ರಸ್ತುತ ಕಾಲದಲ್ಲಿ ವರ್ತಮಾನಕಾಲದಲ್ಲಿ (ವ್ಯಕ್ತಮಾನ ಕಾಲದಲ್ಲಿ) ನಮ್ಮೊಂದಿಗೆ ಇರುವ ನೀನು ಆ ವಿಷಯವನ್ನು ಹೇಗೆ ಹೇಳುತ್ತಿದ್ದೀಯ? ಮನುವಿಗೆ ಸೂರ್ಯನ ವಿಷಯವೇ ತಿಳಿಯದೆಂಬ ವಿಷಯ ನಿನಗೆ ಹೇಗೆ ತಿಳಿದಿದೆ?**

**ಉತ್ತರ :–** ನಾನು ಇದಕ್ಕೂ ಮೊದಲು ಸಹ ಬಹಳ ಸಲ ಒಂದು ವಿಷಯವನ್ನು ಹೇಳಿದ್ದೇನೆ. ಅದು ಏನೆಂದರೇ ನಾನು ಯಾವಾಗಲೂ ನಿಜವನ್ನೇ ಹೇಳುವೆನೆಂದು ನೀನು ಅಂದುಕೊಳ್ಳಬೇಡ. ನಾನು ಆಗಾಗ ಅಸತ್ಯವನ್ನು ಸಹ ಹೇಳುವೆನೆಂದು ಅಂದುಕೊಳ್ಳುವುದು ಒಳ್ಳೆಯದು. ಆದ್ದರಿಂದ ನನ್ನ ಮಾತು ಯಾವಾಗ ನಿನಗೆ ಸತ್ಯವೆನಿಸಿದರೇ ಆಗ ಮಾತ್ರ ನನ್ನ ಮಾತನ್ನು ನಂಬು. ಯಾವಾಗ ನನ್ನ ಮಾತು ಅಸತ್ಯವೆನಿಸಿದರೇ ಆಗ ನಂಬಬೇಡ. ನಾನು ಹೇಳುವ ಪ್ರತಿ ಮಾತು ಪೂರ್ತಿ ಸತ್ಯವೆಂದು ನಾನು ಹೇಳುತ್ತಿರುವೆನು. ನಿನಗೆ ಸತ್ಯವೆನಿಸಿದಾಗಲೇ ನಂಬು. ನನ್ನ ಮಾತನ್ನು ನಂಬಿರೆಂದು ನಾನು ಯಾರಿಗೂ ಹೇಳಲಿಲ್ಲ. ಹೇಳುವುದು ನನ್ನ ಸರದಿ, ನಂಬುವುದು ನಂಬದಿರುವುದು ನಿನ್ನ ಕೆಲಸವೆಂದು ಈಗಲೂ ಸಹ ಹೇಳುತ್ತಿದ್ದೇನೆ. ನಾನು ಯಾರಿಗೂ ತಿಳಿಯದ ವಿಷಯಗಳನ್ನೇ, ಸಂಚಲನ ವಿಷಯಗಳನ್ನೇ, ನಂಬುಶಕ್ಯವಲ್ಲದ ವಿಷಯಗಳನ್ನೇ ಹೇಳುತ್ತಿರುವೆನು. ನನ್ನ ಮಾತುಗಳಲ್ಲಿ ಎಷ್ಟು ಸತ್ಯವಿದೆಯೋ ಒಂದು ರೀತಿಯಲ್ಲಿ ನನಗೇ ತಿಳಿದಿಲ್ಲ. ಹಾಗಿರುವಾಗ ನಾನು ಹೇಳುವುದೆಲ್ಲಾ ನಂಬಬೇಕೋ ಬೇಡವೋ ನೀವೇ

ನೋಡಿಕೊಳ್ಳಿರಿ. ನನ್ನ ಮಾತುಗಳನ್ನು ನಂಬುವವರು ಬಹುಶಃ ನೂರಕ್ಕೆ ಹತ್ತು ಮಂದಿ ಮಾತ್ರವೇ ಇರುತ್ತಾರೆ. ಉಳಿದವರು ಯಾರೂ ನಂಬುವುದಿಲ್ಲ. ಖುರಾನ್ ಗ್ರಂಥದಲ್ಲಿ **"ಎಲ್ಲರನ್ನೂ ನನ್ನ ಜ್ಞಾನದೊಳಗೆ ಬರಲು ಬಿಡುವುದಿಲ್ಲ, ಕೆಲವರಿಗೆ ಮಾತ್ರವೇ ನನ್ನ ಜ್ಞಾನ ಅರ್ಥವಾಗುವಂತೆ ಮಾಡುತ್ತೇನೆ. ಉಳಿದವರಿಗೆ ಅರ್ಥವಾಗದಂತೆ ಮಾಡುತ್ತೇನೆ"** ಎಂದು ದೇವರು ಬಹಳ ಸಲ ಹೇಳಿದ್ದಾನೆ. ಎಲ್ಲರೂ ನಂಬಬಾರದೆಂದೇ ದೇವರೂ ಸಹ ಹಾಗೆ ಹೇಳಿದ್ದಾನೆ. ಎಲ್ಲರೂ ನಂಬಿದರೇ ಎಲ್ಲರಿಗೂ ಜ್ಞಾನ ತಿಳಿದು ಎಲ್ಲರೂ ಜ್ಞಾನ ಮಾರ್ಗದೊಳಗೆ ಹೋಗುವ ಅವಕಾಶವಿದೆ. ಎಲ್ಲರಿಗೂ ಜ್ಞಾನ ತಿಳಿಯಬೇಕೆಂದು ನಾನು ಸತ್ಯವನ್ನು ಹೇಳಿದರೂ ದೇವರು ಹೇಳಿದ ಮಾತಿನಿಂದ ನನ್ನ ಮಾತು ಸಹ ಕೆಲವು ಸಂದರ್ಭಗಳಲ್ಲಿ ಅಸತ್ಯವಾಗಿಯೇ ಕಾಣಿಸುತ್ತಿರುವುದು. ಹಾಗೆಂದು ನಾನು ಸತ್ಯವನ್ನು ಹೇಳುತ್ತಿದ್ದೇನೆಂದು ಹೇಳದೇ ಸತ್ಯವನ್ನೇ ಹೇಳುತ್ತಿರುತ್ತೇನೆ. ನನ್ನ ಮಾತು ಸತ್ಯವೋ ಅಲ್ಲವೋ ತಿಳಿಯಬೇಕಾಗಿರುವುದು ನೀವೇ!

ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೊದಲ ಶ್ಲೋಕದಲ್ಲೇ **"ನಾನು ಸೃಷ್ಠಿ ಆದಿಯಲ್ಲಿ ಸೂರ್ಯನಿಗೆ ಹೇಳಿದ್ದೆನು, ನಂತರ ಸೂರ್ಯನು ಮನುವಿಗೆ ಈ ಜ್ಞಾನವನ್ನು ತಿಳಿಸಿದ್ದಾನೆ"** ಎಂದು ಕೃಷ್ಣನು ಅರ್ಜುನನಗೆ ಹೇಳಿದ್ದಾನೆ. ಆಗ, ನೀನು ಈಗ ಕೇಳಿದಂತೇ ಅರ್ಜುನನು ಕೃಷ್ಣನನ್ನು ಈ ಪ್ರಶ್ನೆಯನ್ನೇ ಕೇಳಿದ್ದಾನೆ. ಯಾವಾಗಲೋ ಸೃಷ್ಠಿ ಆದಿಯಲ್ಲಿ ಸೂರ್ಯನು ಹುಟ್ಟಿದ್ದಾನೆ, ನೀನು ಹುಟ್ಟಿರುವುದು ಪ್ರಸ್ತುತ ಕಾಲದಲ್ಲಿ, ಈಗ ಹುಟ್ಟಿದ ನೀನು ಅಂದಿನ ಸೂರ್ಯನಿಗೆ ಹೇಗೆ ಜ್ಞಾನವನ್ನು ಹೇಳಿದ್ದೀಯ? ಎಂದು ಕೇಳುವುದು ನಡೆದಿದೆ. ಅದು ದೊಡ್ಡ ಪ್ರಶ್ನೆಯೇ ಆದರೂ ಕೃಷ್ಣನು ಸುಲಭವಾಗಿ ಉತ್ತರವನ್ನು ಹೇಳಿದ್ದಾನೆ. ಅಲ್ಲಿ ಕೃಷ್ಣನು ಏನು ಹೇಳಿದ್ದಾನೋ ನಿಮಗೆ ತಿಳಿದಿದೆ. ಒಂದು ವೇಳೆ ತಿಳಿಯದವರಿದ್ದರೇ ಈಗ ಭಗವದ್ಗೀತೆಯನ್ನು ನೋಡಿದರೇ ಏನು ಹೇಳಿರುವುದು ತಿಳಿಯಬಲ್ಲದು. ಕೃಷ್ಣನು ಆಗಲೂ ಸಹ ನಾನೂ ಸಹ ಹುಟ್ಟಿದ್ದೆನು ಎಂದು ಹೇಳಿದ ಉತ್ತರವನ್ನು ನೋಡಿದ ಅರ್ಜುನನು

"ನಾವು ಹೇಗೆ ನಂಬಬೇಕು?" ಎಂದು ಪ್ರಶ್ನಿಸಲಿಲ್ಲ. ಪ್ರಶ್ನಿಸದಿದ್ದರೂ ಕೃಷ್ಣನು ಹೇಳಿದ ಮಾತಿನ ಮೇಲೆ ಅರ್ಜುನನಗೆ ಅನುಮಾನವಿತ್ತು. ಕೃಷ್ಣನು ಅಸತ್ಯವನ್ನು ಹೇಳುತ್ತಿದ್ದಾನೆಂದು ಅರ್ಜುನನು ತನ್ನ ಬುದ್ಧಿಯಲ್ಲಿ ಅಂದುಕೊಳ್ಳುವುದು ನಡೆದಿದೆ. ಆಗ ಕೃಷ್ಣನು ಅರ್ಜುನನು ಅಂದುಕೊಂಡ ವಿಷಯವನ್ನು ಗ್ರಹಿಸಿದ್ದಾನೆ. ಆದರೂ ಇತ್ತ ಅರ್ಜುನನು ಅನುಮಾನವಿದ್ದಂತೆ ಹೊರಬೀಳಲಿಲ್ಲ. ಅತ್ತ ಕೃಷ್ಣನು ತಿಳಿದೂ ಸಹ ತಿಳಿಯದಂತಿದ್ದು ನಂತರ ವಿಷಯವನ್ನು ಹೇಳಿದ್ದಾನೆ.

ಈಗ ನೀನೂ ಸಹ ಅಂತಹ ಪ್ರಶ್ನೆಯನ್ನೇ ಕೇಳಿದ್ದೀಯ. ಆದರೇ ಕೃಷ್ಣನ ಹಾಗೆ ನಾನು ಸಮಾಧಾನವನ್ನು ಹೇಳಲಿಲ್ಲ. ನಾನು ಕೆಲವು ಅಸತ್ಯಗಳನ್ನು ಸಹ ಹೇಳುತ್ತಿರುವೆನೆಂದು, ಯಾವುದು ನಿಜವೋ ಯಾವುದು ಅಸತ್ಯವೋ ನೀನೇ ಗ್ರಹಿಸಿಕೋ ಎಂದು ಹೇಳಿದ್ದೇನೆ. ಅರ್ಜುನನಲ್ಲಿ ಬೆಳೆದ ಅನುಮಾನಗಳಿಗೆ, ಕೃಷ್ಣನ ಮಾತುಗಳ ಮೇಲೆ ಬಂದಿರುವ ಅಪನಂಬಿಕೆಗೆ ಕೊನೆಗೆ ಕೃಷ್ಣನು ವಿಶ್ವರೂಪ ವನ್ನು ತೋರಿಸಿ ಅರ್ಜುನನಿಗೆ ಇನ್ನು ಯಾವ ಅನುಮಾನ ಉಳಿಯದಂತೆ ಮಾಡಿದ್ದಾನೆ. ವಿಶ್ವರೂಪವನ್ನು ಕೃಷ್ಣನ ಹಾಗೆ ತೋರಿಸಿ ನಿನ್ನ ಅನುಮಾನಗಳನ್ನು ನಾನು ಬಗೆಹರಿಸಲಾರೆ, ನಾನು ಸಾಧಾರಣ ಮನುಷ್ಯನೇ ಆದ್ದರಿಂದ ನಾನು ಮೊದಲೇ ನನ್ನ ಮಾತುಗಳೆಲ್ಲವನ್ನೂ ನಂಬಬೇಡ ಎಂದು ಹೇಳಿದ್ದೇನೆ. ಕೆಲವು ಮಾತ್ರವೇ ಸತ್ಯಗಳಿರುತ್ತವೆ ಎಂದು ಸಹ ಹೇಳಿದ್ದೇವೆ. ಆದರೇ ನಾನು ಹೇಳುವವೆಲ್ಲಾ ಸತ್ಯಗಳೆಂದೇ ನನಗೆ ತಿಳಿದಿದೆ. ಆದರೇ ಆ ವಿಷಯ ಇತರರಿಗೆ ತಿಳಿಯಬೇಕೆಂಬ ನಿಯಮ ಏನೂ ಇಲ್ಲ ಅಲ್ಲವೆ! ಆದ್ದರಿಂದ ನಾನು ಹಾಗೆ ಹೇಳಿದ್ದೇನೆ. ನಾನು ಹಾಗೆ ಹೇಳುವುದರಿಂದ ನಿನ್ನ ಮಾತು ಅಸತ್ಯವೆಂದು ಯಾರೂ ನನ್ನೊಂದಿಗೆ ವಾದಿಸುವುದಿಲ್ಲ ಹಾಗೂ ಪ್ರಶ್ನಿಸುವುದಿಲ್ಲ. ನನ್ನ ಮಾತು ಸತ್ಯವೋ ಅಲ್ಲವೋ ನೀವೇ ನೋಡಿಕೊಳ್ಳಿರಿ. ಸತ್ಯವಾದರೇ ನಂಬಿರಿ, ಸತ್ಯ ವಲ್ಲದಿದ್ದರೇ ನಂಬಬೇಡಿ ಎಂದು ಸಹ ಹೇಳಿದ್ದೇನೆ. "ಆಪತ್ತುಗಳಲ್ಲಿ ಅಸತ್ಯವಾಡಿ ಯಾದರೂ ಆಪತ್ತಿನಿಂದ ಹೊರಬೀಳಬಹುದೆಂದು" ಹಿರಿಯರು ಹೇಳಿದ ಮಾತನ್ನು ಅನುಸರಿಸಿದ್ದೇನೆ.

**ಪ್ರಶ್ನೆ :– ಕೃಷ್ಣನು ಆ ಕಾಲದಲ್ಲಿ ಕೈಗಾರಡೀ (ಜಾದೂ) ಮಾಡಿದ್ದಾನೆಂದು ಕೇಳಿದ್ದೇವೆ. ಆದರೇ ನೀವು ಈಗ ಮಾತುಗಳ ಗಾರಡೀ ಮಾಡುತ್ತಿದ್ದೀರೆಂದು ನಮಗೆ ಅರ್ಥವಾಗಿದೆ. ನೀವು ಎಷ್ಟು ಮುಚ್ಚಿಟ್ಟುಕೊಳ್ಳಬೇಕೆಂದು ಪ್ರಯತ್ನಿಸಿದರೂ, ಮುಚ್ಚಿಡಲಾರದ ಒಂದು ಅಸತ್ಯವನ್ನು ನೀವು ಹೇಳಿದಂತೆ ಋಜುವು ಮಾಡುತ್ತೇನೆ ನೋಡಿರಿ. ನೀವು ಈ ಮಧ್ಯಕಾಲದಲ್ಲಿ ಈ ತಿಂಗಳಲ್ಲಿಯೇ "ಲು ಎಂದರೆ ಏನು?" ಎಂಬ ಹೆಸರಿರುವ ಒಂದು ಚಿಕ್ಕ ಗ್ರಂಥವನ್ನು ಬರೆದು ಬಿಡುಗಡೆ ಮಾಡಿದ್ದೀರ. ಆ ಗ್ರಂಥದಲ್ಲಿ 40ನೇ ಪುಟದಲ್ಲಿ ಆರಂಭದಲ್ಲೇ ಹೀಗೆ ಬರೆದಿದ್ದೀರ. "ಪ್ರಪಂಚದಲ್ಲಿ ಪ್ರಜೆಗಳೆಲ್ಲರಿಗೂ ಮೊದಲ ಗುರುವು ಸೂರ್ಯನೇ ಎಂದು ತಿಳಿಸುವ ಸಲುವಾಗಿ "ಆದಿತ್ಯ" ಎಂಬ ಹೆಸರನ್ನು ಸೂರ್ಯನಿಗೆ ಮನುವೇ ನಾಮಕರಣವನ್ನು ಮಾಡಿದ್ದಾನೆ. ನಂತರ ಬಹಳ ಹೆಸರುಗಳು ಸೂರ್ಯನಿಗೆ ತೆಲುಗು ಭಾಷೆಯಲ್ಲಿ ತಯಾರಾಗಿವೆ" ಈ ವಾಕ್ಯವನ್ನು ಸ್ವತಃ ನೀವೇ ಹೇಳಿದ್ದೀರ. ಈಗೇನೋ ಮನುವಿಗೆ ಜ್ಞಾನ ಹೇಳಿರುವುದು ಸೂರ್ಯನೆಂದು ತಿಳಿದಿಲ್ಲವೆಂದಿದ್ದೀರ. ಆಗೇನೋ ಸೂರ್ಯನಿಗೆ ಆದಿತ್ಯನೆಂದು ಮನುವೇ ಹೆಸರನ್ನಿಟ್ಟಂತೆ ಹೇಳಿದ್ದೀರ. ಆಗೊಂದು ಮಾತು, ಈಗೊಂದು ಮಾತು ಹೇಳುವುದನ್ನನುಸರಿಸಿ ನೋಡಿದರೆ ಇದರಲ್ಲಿ ಯಾವುದೋ ಒಂದು ಸತ್ಯವಿದ್ದರೂ ಮತ್ತೊಂದು ಅಸತ್ಯವೆಂದು ತಿಳಿದುಹೋಗುತ್ತಿದೆ. ನಿಮಗೆ ಹಾಗೆ ಅಸತ್ಯವನ್ನು ಹೇಳಬೇಕಾದ ಅವಶ್ಯವೇನಿದೆ? ಅಸತ್ಯದಿಂದ ಮನುಷ್ಯರಿಗೆ ಜ್ಞಾನ ತಿಳಿಯುತ್ತದಾ ಎಂದು ಪ್ರಶ್ನಿಸುತ್ತಿದ್ದೇವೆ. ಇದಕ್ಕೆ ಉತ್ತರವನ್ನು ಹೇಳಿರಿ. ನಾವು ಉತ್ತರವನ್ನು ಕೇಳಿದ್ದೇವೆಂದು ಉತ್ತರದಲ್ಲಿಯೂ ಸಹ ನಮ್ಮನ್ನು ಮೋಸಮಾಡದೆ ಸತ್ಯವನ್ನೇ ತಿಳಿಸಿರೆಂದು ಕೋರುತ್ತಿದ್ದೇವೆ.**

**ಉತ್ತರ :–** ಆಕಾಶದಲ್ಲಿ ಏಳು ಬಣ್ಣಗಳ ಕಾಮನಬಿಲ್ಲು ಕಾಣಿಸುತ್ತದೆ. ಆದರೇ ಅಲ್ಲಿ ವಾಸ್ತವವಾಗಿ ಏಳು ಬಣ್ಣಗಳು ಇಲ್ಲ. ಅಲ್ಲಿರುವುದು ಸೂರ್ಯಕಿರಣ ಮಾತ್ರವೇ. ಆದರೇ ಸೂರ್ಯಕಿರಣ ಕಾಣಿಸದಂತೆ ಏಳು ಬಣ್ಣಗಳು ಕಾಣಿಸುತ್ತಿವೆ. ಆಗ ಅದನ್ನು ಏಳು ಬಣ್ಣಗಳೆನ್ನಬೇಕಾ? ಇಲ್ಲವೆ ಸೂರ್ಯಕಿರಣವೆನ್ನಬೇಕಾ? ತಾತ್ಕಾಲಿಕಕ್ಕೆ ಏಳು ಬಣ್ಣಗಳು ಕಾಣಿಸಿದರೂ ಅವು ಅಶಾಶ್ವತವೇ. ಆ ಏಳು

ಬಣ್ಣಗಳ ಹಿಂದೆ ಅಡಗಿರುವ ಸೂರ್ಯಕಿರಣವೇ ಸತ್ಯವೆಂದು ಹೇಳಬಹುದು. ಆದರೂ ಸತ್ಯವಾದ ಸೂರ್ಯಕಿರಣವು ಕಾಣಿಸದಷ್ಟು ಮಾತ್ರಕ್ಕೆ ಸೂರ್ಯಕಿರಣ ವನ್ನು ಅಸತ್ಯವೆಂದು ಹೇಳಲಾರೆವು. ಹಾಗೆಯೇ ನನ್ನ ಮಾತಿನಲ್ಲಿನ ಬಣ್ಣಗಳೇ ನಿನಗೆ ಕಾಣಿಸಿವೆ. ಆದರೇ ನನ್ನ ಮಾತಿನಲ್ಲಿನ ಸತ್ಯ ನಿನಗೆ ಕಾಣಿಸಲಿಲ್ಲ. ನಿಮ್ಮನ್ನು ಮೋಸಮಾಡಿದರೂ ಅದು ನಿಮ್ಮನ್ನು ದೇವರ ಹತ್ತಿರಕ್ಕೆ ನಡೆಸುವುದಕ್ಕೇ ಎಂದು ಅರ್ಥ ಮಾಡಿಕೊಳ್ಳಬೇಕು. ಆದರೂ ನಾನು ಅಸತ್ಯವನ್ನು ಹೇಳದಂತೆ ಸತ್ಯವನ್ನೇ ಹೇಳುತ್ತಿದ್ದೇನೆ. ನೀವು ಅರ್ಥ ಮಾಡಿಕೊಳ್ಳುವುದರಲ್ಲಿ ಲೋಪವೇ ಹೊರತು, ನನ್ನ ಮಾತುಗಳಲ್ಲಿ ಲೋಪವಿಲ್ಲ. ದೃಷ್ಠಿ ಇಲ್ಲದವನು ಆನೆ ಕಾಲನ್ನು ಹಿಡಿದುಕೊಂಡು ಸ್ಥಂಭ ಎಂದುಕೊಂಡನಂತೆ. ಹಾಗೆಯೇ ಕಿವಿಯನ್ನು ಹಿಡಿದುಕೊಂಡು ಮೊರವೆಂದು ಅಂದುಕೊಂಡನಂತೆ. ಅಲ್ಲಿ ಆನೆ ಸತ್ಯವೇ ಆದರೂ ಅವನು ಅಂದುಕೊಳ್ಳುವುದು ಅಸತ್ಯ. ಹಾಗೆಯೇ ನಾವು ಸತ್ಯವನ್ನೇ ಹೇಳಿದರೂ ಕೆಲವು ವಿಷಯಗಳು ನಿಮಗೆ ಅರ್ಥವಾಗದಿರುವುದರಿಂದ ಅವುಗಳ ವಿಷಯದಲ್ಲಿ ನೀವು ನನ್ನನ್ನೇ ಅಸತ್ಯವನ್ನು ಹೇಳಿದಂತೆ ಅಂದುಕೊಳ್ಳುವುದು ನಡೆಯುತ್ತಿದೆ. ಇದೆಲ್ಲವೂ ನಿಮ್ಮ ಅವಗಾಹನೆ ಲೋಪವೇ ಹೊರತು, ನನ್ನ ಬಾಧ್ಯತಾ ರಾಹಿತ್ಯವಲ್ಲ. ನಾನು ಬಾಧ್ಯತೆಯನ್ನು ಸಕ್ರಮವಾಗಿಯೇ ಮಾಡುತ್ತಿದ್ದೇನೆ. ಈಗ ನಾನು ಮುಂದೆ ಒಂದು ಮಾತನ್ನು ನಂತರ ಹಿಂದೆ ಮತ್ತೊಂದು ಮಾತನ್ನು ಹೇಳಿದಂತೆ ನೀವು ಆರೋಪಿಸುತ್ತಿದ್ದೀರ. ಇಲ್ಲಿ ಕೂಡಾ ನೀವೇ ತಪ್ಪಾಗಿ ತಿಳಿದಿದ್ದೀರ ಆದರೆ, ನಾನು ಹೇಳಿರುವುದು ಅಸತ್ಯವಲ್ಲ. ಇಲ್ಲಿ ಒಂದು ಚಿಕ್ಕ ಉದಾಹರಣೆಯನ್ನು ಹೇಳುವೆನು ಕೇಳಿರಿ. ನೂರು ವರ್ಷಗಳ ಕೆಳಗೆ ಒಬ್ಬನು ಎಲ್ಲ ವಿಧಗಳಲ್ಲಿ ಬಡತನವನ್ನು ಅನುಭವಿಸುತ್ತಿದ್ದನು. ಒಬ್ಬ ಧನಿಕನು ಪುಣ್ಯವನ್ನು ಸಂಪಾದಿಸಿಕೊಳ್ಳುವ ಸಲುವಾಗಿ ಯಾವುದೇ ಒಬ್ಬ ಬಡವನಿಗೆ ಸಹಾಯ ಮಾಡಬೇಕೆಂದುಕೊಂಡಿದ್ದಾನೆ. ಆತನು ಎಲ್ಲಾ ವಿಧಗಳ ಬಡತನವನ್ನು ಅನುಭವಿಸುವವನನ್ನು ಆಯ್ಕೆ ಮಾಡಿಕೊಂಡು ಅವನಿಗೆ ಸಹಾಯ ಮಾಡಬೇಕೆಂದುಕೊಂಡಿದ್ದಾನೆ. ಹಾಗೆಯೇ ಒಂದು ದಿನ ಆ ಬಡವನ ಮನೆ ಹತ್ತಿರಕ್ಕೆ ಬಂದು, ತನ್ನದು ಯಾವ ಊರೆಂದು ಹೇಳದೇ, ತಾನು ಇಂತಹವನೆಂದು

ಹೇಳದೇ, ಆ ಬಡವನಿಗೆ ಹತ್ತು ಲಕ್ಷ ರೂಪಾಯಿಗಳನ್ನು ದಾನವಾಗಿ ಕೊಟ್ಟಿದ್ದಾನೆ. ಒಂದು ದೈವ ಗ್ರಂಥದಲ್ಲಿ **"ಬಲಗೈಯಿಂದ ಕೊಡುವ ದಾನ ಎಡಗೈಯಿಗೂ ಸಹ ತಿಳಿಯದೇ ಕೊಟ್ಟರೇ ಅದು ನಿಸ್ವಾರ್ಥ ದಾನವಾಗುತ್ತದೆ. ಹಾಗೆ ದಾನ ಮಾಡುವುದು ಒಳ್ಳೆಯದೆಂದು"** ಹೇಳಿರುವುದರಿಂದ ಆತನು ದಾನ ಮಾಡಿದ್ದರೂ ತಾನು ಯಾರಾಗಿರುವುದೂ ಸಹ ಹೇಳದೇ, ಯಾರಿಗೂ ತಿಳಿಯದಂತೆ ಹತ್ತು ಲಕ್ಷ ರೂಪಾಯಿಗಳನ್ನು ದಾನ ಕೊಡುವುದರಿಂದ, ದಾನ ಕೊಟ್ಟಿರುವವನು ಯಾರಾಗಿರುವುದು ದಾನ ತೆಗೆದುಕೊಂಡ ಬಡವನಿಗೂ ಸಹ ತಿಳಿದಿಲ್ಲ. ಆದರೇ ದಾನ ಕೊಟ್ಟವನು ತಿಳಿದಿದ್ದಾನಾಗಲೀ ಆತನು ಯಾರಾಗಿರುವುದು, ಎಲ್ಲಿಂದ ಬಂದಿರುವುದು ತಿಳಿಯದೆ ಹೋದರೂ, ತನಗೆ ದಾನ ಕೊಟ್ಟಿರುವವನು ದೊಡ್ಡವನೆನ್ನುವಂತೆ, ಅದೂ ದಾನ ಕೊಡುವುದರಲ್ಲಿ ಕರ್ಣನೊಂದಿಗೆ ಸಮಾನವಾದವನೆಂದು ತಿಳಿಯುವಂತೆ, "ಅಪರಕರ್ಣ" ಎಂಬ ಹೆಸರನ್ನು ದಾನ ಕೊಟ್ಟಿರುವವನಿಗೆ ಬಿರುದಾಗಿ ಇಡಲಾಗಿದೆ. ದಾನ ಕೊಟ್ಟಿರುವವನಿಗೆ ಅದೇ ಕೆಲಸವಾಗಿ ದಾನ ತೆಗೆದುಕೊಂಡವನು ಹೆಸರು ಇಡುವುದರಿಂದ ದಾನ ಕೊಟ್ಟವನು ಇಂತಹವನೆಂದು ಮಾತ್ರ ತಿಳಿದಿಲ್ಲ ಅಲ್ಲವೆ! ದಾನ ಕೊಟ್ಟಿರುವವನು ಸುವರ್ಣ ಸಂಸ್ಥಾನಕ್ಕೆ ಅಧಿಪತಿಯೆಂದೂ, ಆತನು ದೊಡ್ಡ ಧನಿಕನೆಂದೂ ಈಗ ನಮಗೆ ತಿಳಿದಿದೆ ಎಂದುಕೊಳ್ಳೋಣ. ಅದರಿಂದ ನಾವು ಸುವರ್ಣ ಸಂಸ್ಥಾನಾಧಿಪತಿಗೆ ಬಡವನು "ಅಪರಕರ್ಣ" ಎಂದು ಈಗ ಹೆಸರು ಇಟ್ಟಿದ್ದಾನೆಂದು ಈಗ ಇತರರೊಂದಿಗೆ ಹೇಳಿದ್ದೇವೆ. ಈಗ ದಾನ ಕೊಟ್ಟವನು ಸುವರ್ಣ ಸಂಸ್ಥಾನಾಧಿಪತಿಯೆಂದು ಇತರರಿಗೆ ನಾವು ಹೇಳಿದಷ್ಟು ಮಾತ್ರಕ್ಕೆ ಆಗ ಬಡವನಿಗೆ ಆ ಹೆಸರು ತಿಳಿದಿಲ್ಲ ಅಲ್ಲವೆ!

ಅದೇ ರೀತಿ ಪೂರ್ವದಲ್ಲಿ ಸೂರ್ಯನು ಜ್ಞಾನಾರ್ಥಿ ಆದವನಿಗೆ ತನಗೆ ತಿಳಿದ ಜ್ಞಾನವನ್ನು ಹೇಳಬೇಕೆಂದುಕೊಂಡಿದ್ದಾನೆ. ಭೂಮಿ ಮೇಲಿರುವ ಮನುವನ್ನು ಆಯ್ಕೆ ಮಾಡಿಕೊಂಡಿದ್ದಾನೆ. ಮನುವಿನ ಹತ್ತಿರಕ್ಕೆ ಸಾಧಾರಣವಾಗಿ ಬಂದು ತನ್ನ ಜ್ಞಾನವನ್ನು ಹೇಳಿದ್ದಾನೆ. ಮನುವಿಗೆ ಜ್ಞಾನ ಹೇಳಿದಾಗ ಮನುವು

ಜ್ಞಾನವನ್ನು ತಿಳಿದಿದ್ದಾನೆ ಆದರೆ ಹೇಳಿದವನು ಯಾರು? ಎಂಬ ವಿಷಯ ಮಾತ್ರ ತಿಳಿದಿಲ್ಲ. ಹೇಳಿದವನು ಅಲ್ಲಿಯವರೆಗು ಭೂಮಿ ಮೇಲೆ ಇಲ್ಲದ ಜ್ಞಾನವನ್ನು ಹೇಳಿರುವುದರಿಂದ, ಹೇಳಿದವನನ್ನು "ಗುರುವು" ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೇ ವಿಶೇಷವಾಗಿ "ಆದಿತ್ಯನು" ಎಂಬ ಹೆಸರನ್ನು ಇಟ್ಟಿದ್ದಾನೆ. ಆ ವಿಷಯವನ್ನು ನಿಮಗೆ ನಾವು ಹೇಳುತ್ತಾ "ಸೂರ್ಯನಿಗೆ ಮನುವು ಆದಿತ್ಯನೆಂದು ಹೆಸರು ಇಟ್ಟಿದ್ದಾನೆ" ಎಂದು ಹೇಳಿದ್ದೇವೆ. ಅದು ನಾವು ಇತರರಿಗೆ ಈಗ ಹೇಳಿದ ಮಾತೇ ಹೊರತು, ಭಗವದ್ಗೀತೆ ಹುಟ್ಟುವುದಕ್ಕಿಂತ ಮೊದಲು ಆಗ ಮನುವಿಗೆ ಜ್ಞಾನವನ್ನು ಹೇಳಿರುವುದು ಸೂರ್ಯನೆಂದು ಸಹ ತಿಳಿದಿಲ್ಲ. ಈಗ ಭಗವದ್ಗೀತೆ ಹೊರ ಬಂದಿದೆ ನಂತರ ಮನುವಿಗೆ ಜ್ಞಾನ ಹೇಳಿರುವುದು ಸೂರ್ಯನೆಂದು ನಮಗೆ ತಿಳಿದಿದೆ. ಆ ಕಾಲದಲ್ಲಿ ಮನುವಿಗೆ ಜ್ಞಾನ ಹೇಳಿರುವುದು ಯಾರಾಗಿರುವುದು ತಿಳಿಯದಿದ್ದರೂ, ಹೇಳಿದವನು ವಿಶೇಷವಾದ ಜ್ಞಾನವನ್ನು ಹೇಳಿದ್ದಾನಾದ್ದರಿಂದ ಹೇಳಿದವನಿಗೆ "ಆದಿತ್ಯ" ಎಂಬ ಹೆಸರನ್ನು ಇಟ್ಟಿದ್ದಾನೆ. ಜ್ಞಾನವನ್ನು ಹೇಳಿದವರಲ್ಲಿ ಮೊದಲನೆಯವನು ಎಂದು ಹೇಳುವ ತನ್ನ ಭಾವವನ್ನು 'ಆದಿತ್ಯ' ಎಂದು ಅಂದಿದ್ದಾನೆ. "ದಿತ್ಯ" ಎಂದರೆ ಎರಡನೆಯವನೆಂದೂ, "ಆ" ಎಂದರೇ ಇಲ್ಲವೆಂದೂ, "ಆದಿತ್ಯ" ಎಂದರೆ ಆತನೊಂದಿಗೆ ಸಮಾನವಾದವನು ಯಾರೂ ಇಲ್ಲವೆಂದು ಅರ್ಥ. ಹೇಳಲಾಗಿರುವ ಜ್ಞಾನ ವಿಶೇಷವಾದದ್ದೆಂದು ಗ್ರಹಿಸಿದ ಮನುವು ಜ್ಞಾನ ಹೇಳಿದವನು ಸೂರ್ಯನೆಂದು ತಿಳಿಯದಿದ್ದರೂ ಆತನು ಹೇಳಿರುವ ಜ್ಞಾನವನ್ನನುಸರಿಸಿ 'ಆದಿತ್ಯ' ಎಂದು ಹೇಳುವುದಾಗಿದೆ. ಈಗ ಆ ವಿಷಯವನ್ನು ತಿಳಿದ ನಾವು ಮನುವು ಸೂರ್ಯನಿಗೆ 'ಆದಿತ್ಯ' ಎಂದು ಹೆಸರಿಟ್ಟಿದ್ದಾನೆಂದು ಹೇಳಿದ್ದೇವೆ ಆದರೆ, ಆಗ ಮನುವಿಗೆ ಆದಿತ್ಯನು ಯಾರಾಗಿರುವುದು ತಿಳಿದಿದೆಯೆಂದು ಹೇಳಲಿಲ್ಲ, ಜ್ಞಾನ ಹೇಳಿದವರಲ್ಲಿ ಈತನನ್ನು ಮೀರಿದ ಎರಡನೆಯವನು ಇಲ್ಲವೆಂದು ಪ್ರಜೆಗಳಿಗೆ ತಿಳಿಸುವ ಸಲುವಾಗಿ ಆದಿತ್ಯನೆಂಬ ಹೆಸರನ್ನು ಸೂರ್ಯನಿಗೆ ಮನುವೇ ಇಡುವುದು ನಡೆದಿದೆ ಎಂದು ನಾವು ಬರೆದಿದ್ದೇವೇ ಹೊರತು, ಮನುವಿಗೆ ಆದಿತ್ಯನು ಸೂರ್ಯನೇಯೆಂದು ತಿಳಿದಿದೆಯೆಂದು ಹೇಳಲಿಲ್ಲ ಅಲ್ಲವೆ.

ಇಲ್ಲಿಯವರೆಗೂ ನನ್ನ ಮಾತನ್ನು ನೀನು ಎಷ್ಟು ಅಸತ್ಯವೆಂದಿದ್ದೀಯೋ ಅಷ್ಟೇ ತಪ್ಪಾಗಿ ನೀನು ಅರ್ಥೈಸಿಕೊಂಡಿದ್ದೀಯೆಂದು ತಿಳಿಯುತ್ತಿದೆ. ಸೂರ್ಯನು ಜ್ಞಾನ ಹೇಳಿರುವುದು ನಿಜವೇ, ಮನುವು ತಾನು ಕೇಳಿದ ಜ್ಞಾನವನ್ನನುಸರಿಸಿ ಹೇಳಿದವನನ್ನು ಆದಿತ್ಯನು ಎಂದು ಹೇಳಿದ ಮಾತು ನಿಜವೇ. ಎಷ್ಟು ಜ್ಞಾನವನ್ನು ಹೇಳಿದರೂ ಸೂರ್ಯನು ಇಂತಹವನೆಂದು, ತನ್ನ ಹೆಸರು ಇಂತಹದೆಂದು ಹೇಳಲಿಲ್ಲವೆಂದು ಹೇಳಿದ ಮಾತು ನಿಜವೇ. ಮನುವು ಸತ್ತುಹೋಗುವವರೆಗೇ ಅಲ್ಲದೇ ಮೂರು ಯುಗಗಳು ಕಳೆಯುವವರೆಗೂ ಪ್ರಜೆಗಳಿಗೆ ಯಾರಿಗೂ ಸೂರ್ಯನು ಭೂಮಿಯ ಮೇಲೆ ಜ್ಞಾನವನ್ನು ಹೇಳಿದ್ದಾನೆಂಬ ವಿಷಯವೇ ತಿಳಿದಿಲ್ಲ. ಕೃಷ್ಣನು ಭಗವದ್ಗೀತೆಯನ್ನು ಹೇಳಿದಾಗ ಸೃಷ್ಠಿ ಆದಿಯಲ್ಲಿ ಸೂರ್ಯನು ಆಕಾಶದಿಂದ ವಾಣಿ ಮೂಲಕ ಕೇಳಿದ ಜ್ಞಾನವನ್ನು ಭೂಮಿಯ ಮೇಲೆ ಮನುವಿಗೆ ಹೇಳಿದ್ದಾನೆಂದು ಬೋಧಿಸಿದಾಗ ಆ ವಿಷಯ ಹೊರಬಿದ್ದಿದೆ. ಆ ವಿಷಯ ತಿಳಿಯುವುದರಿಂದ ಆದಿತ್ಯನೆಂಬ ಹೆಸರನ್ನು ಮನುವು ಸೂರ್ಯನಿಗೆ ಹೇಳಿದ್ದಾನೆಂದು ಹೇಳಿದ್ದೇವೆ. ಹೇಳಿದವನು ಆದಿತ್ಯನೆಂಬ ಹೆಸರಿಗೆ ತಕ್ಕವನೆಂದು ತಿಳಿದ ಮನುವು ಆ ಹೆಸರನ್ನು ಜ್ಞಾನ ಹೇಳಿದವನಿಗೆ ಇಟ್ಟಿದ್ದಾನೆ. ಆ ಹೆಸರಿಡುವಾಗ ಹೇಳಿದವನು ಸೂರ್ಯನೆಂದು ಮನುವಿಗಾಗಲೀ, ಮತ್ಯಾವ ಇತರ ಮಾನವನಿಗಾ ಗಲೀ ತಿಳಿದಿಲ್ಲ.

**ಪ್ರಶ್ನೆ :– ಎಷ್ಟೋ ವಿಶೇಷ ಜ್ಞಾನವನ್ನು ಹೇಳಿದ ಸೂರ್ಯನು ತನ್ನ ಹೆಸರನ್ನು ಏಕೆ ಗುಪ್ತವಾಗಿ ಇಟ್ಟುಕೊಂಡಿದ್ದಾನೆ. ಹಾಗೆ ಹೇಳದಂತೆ ಇರುವುದಕ್ಕೆ ಕಾರಣವೇನಾದರೂ ಇದೆಯಾ?**

**ಉತ್ತರ :–** ಮೂರು ಯುಗಗಳ ನಂತರ ಕೃಷ್ಣನು ಭಗವದ್ಗೀತೆಯನ್ನು ಅರ್ಜುನನಿಗೆ ಬೋಧಿಸಿದ ಸಮಯದಲ್ಲಿ, ಸೂರ್ಯನು ಮನುವಿಗೆ ಜ್ಞಾನವನ್ನು ಹೇಳಿದ್ದಾನೆಂದು ತಿಳಿದಿರುವುದು ಸಹ ಒಳ್ಳೆಯದಲ್ಲವೇನೋ ಎಂದು ನಾವು ಅಂದುಕೊಳ್ಳುತ್ತಿದ್ದೇವೆ. ಸೂರ್ಯನು ಎಲ್ಲ ವಿಧಗಳಲ್ಲಿ ಆಲೋಚಿಸಿ ತನ್ನ ಹೆಸರನ್ನು ಹೇಳಲಿಲ್ಲ. ಸ್ವತಃವಾಗಿ ಸೂರ್ಯನು ತನ್ನ ಹೆಸರನ್ನು ಹೇಳಿದ್ದರೇ ಮನುಷ್ಯರು ದೇವರನ್ನು

ಬಿಟ್ಟು ಸೂರ್ಯನನ್ನೇ ಹೆಚ್ಚಾಗಿ ಆರಾಧಿಸುತ್ತಿದ್ದರು. ಅಂತಹ ಕೆಲಸವನ್ನು ಮಾಡುತ್ತಾರೆಂಬ ಉದ್ದೇಶ್ಯದಿಂದ ಸೂರ್ಯನು ತನ್ನ ಹೆಸರನ್ನು ಹೊರಗೆ ಹೇಳದಂತೆ ತನಗೆ ತಿಳಿದ ಜ್ಞಾನವನ್ನು ಹೇಳುವುದು ನಡೆದಿದೆ.

**ಪ್ರಶ್ನೆ :– ನೀವು ಗತಕಾಲದಲ್ಲಿ "ವಾರ್ತಕನು–ವರ್ತಕನು" ಎಂಬ ಚಿಕ್ಕ ಗ್ರಂಥದಲ್ಲಿ ಸೂರ್ಯನು ಮನುವಿಗೆ ಜ್ಞಾನ ಹೇಳಿದಂತೆ ತಿಳಿದಿದೆಯೆಂದೂ, ಸೂರ್ಯನಿಂದ ಜ್ಞಾನ ತಿಳಿದಿರುವುದರಿಂದ ಸೂರ್ಯನ ಗುರುತನ್ನೇ ಹಣೆಯ ಮೇಲೆ ಗುರುತಾಗಿ ಇಟ್ಟುಕೊಂಡಿದ್ದಾನೆಂದೂ, ಸೂರ್ಯನ ಗುರುತನ್ನು ಅನುಸರಿಸಿ ತನ್ನದು ಸೂರ್ಯವಂಶವೆಂದು ಹೇಳಿದ್ದಾನೆಂದೂ ಬರೆದಿದ್ದೀರ. ಈಗ ಹೋಲಿಕೆ ಇಲ್ಲದಂತೆ ಹೇಳುತ್ತಿದ್ದೀರ. ನೀವು ಏಕೆ ಹಾಗೆ ಹೇಳುತ್ತಿದ್ದೀರ? ಜ್ಞಾನದ ಹತ್ತಿರ ಅಸತ್ಯವನ್ನು ಹೇಳಬಾರದಲ್ಲವೆ! ಆ ಗ್ರಂಥದಲ್ಲಿ ಹಾಗೆ ಹೇಳಿ, ಈ ಗ್ರಂಥದಲ್ಲಿ ಹೀಗೆ ಹೇಳಿದ್ದೀರ. ಹಾಗೆ ಹೇಳಬೇಕಾದ ಅವಶ್ಯ ನಿಮಗೆ ಏನು ಬಂದಿದೆ?**

**ಉತ್ತರ :–** ಹೌದು ಅಲ್ಲಿ ನೀವು ಹೇಳಿದಂತೇ ಬರೆದಿದ್ದೇವೆ. ಆದರೇ ಅಲ್ಲಿ ಮುಖ್ಯವಾಗಿ ಒಂದು ಮಾತು ಇರುವುದನ್ನು ಯಾರೂ ಗಮನಿಸಿರುವುದಿಲ್ಲ. ಅದೇನೆಂದರೇ **ಯಾವಾಗಾದರೇ ಸೂರ್ಯನು ಮನುವಿಗೆ ಜ್ಞಾನವನ್ನು ಹೇಳಿದ್ದಾನೋ ಆಗಲೇ ಮನುವಿನಲ್ಲಿ ಮಾಯೆ ಕೆಲಸ ಮಾಡಲು ಪ್ರಾರಂಭಿಸಿದೆಯೆಂದು ಹೇಳಿದ್ದೇವೆ. "ವಾರ್ತಕನು–ವರ್ತಕನು"** ಎಂಬ ಗ್ರಂಥದಲ್ಲಿ 8ನೇ ಪುಟದಲ್ಲಿ ಮತ್ತು 9ನೇ ಪುಟದಲ್ಲಿ ಹೀಗೆ ಬರೆಯಲಾಗಿದೆ ನೋಡಿರಿ. "ಯಾವಾಗಾದರೇ ಮನುವು ಜ್ಞಾನವನ್ನು ಸೂರ್ಯನಿಂದ ತಿಳಿದಿದ್ದಾನೋ, ಆಗಲೇ ಮನುವು ಎಂಬ ವ್ಯಕ್ತಿಯಲ್ಲಿ ಸ್ವಲ್ಪ ಮಾಯ ಕೆಲಸ ಮಾಡಿದೆ. ಅದು ಮಾಯ ಎಂದು ತಿಳಿಯದಂತೆ ಮನುವು ತಲೆಯಲ್ಲಿನ ಗುಣ ಕೆಲಸಮಾಡಿ, ಸೂರ್ಯನು ತನಗೆ ಜ್ಞಾನ ಹೇಳಿರುವುದಕ್ಕೆ, ತನ್ನ ತಲೆಯಲ್ಲಿ ಸೂರ್ಯನ ಜ್ಞಾನ ನೆಲೆಸಿರುವುದಕ್ಕೆ ತನ್ನ ಮುಖದ ಮೇಲೆ ಹಣೆಯ ಭಾಗದಲ್ಲಿ ಸೂರ್ಯನ ಗುರುತನ್ನು ಇಟ್ಟುಕೊಳ್ಳುವುದು ನಡೆದಿದೆ."

ಮನುಷ್ಯನಲ್ಲಿ ಮಾಯೆ ಕೆಲಸ ಮಾಡಿದರೆ ಮನುಷ್ಯ ಮಾಯ ಹೇಳಿದಂತೆ ಮಾಡುತ್ತಾ ಹೋಗುತ್ತಿರುವನು. ಮನುವಿನಲ್ಲಿ ಮಾಯೆ ಕೆಲಸ ಮಾಡಲು ಪ್ರಾರಂಭಿಸಿದಾಗ ಆತನ ತಲೆಯಲ್ಲಿನ ಗುಣ ಕೆಲಸ ಮಾಡಿ, ಸೂರ್ಯನ ಗುರುತನ್ನು ತನ್ನ ಮುಖದ ಮೇಲೆ ಹಣೆಯ ಭಾಗದಲ್ಲಿ ಇಟ್ಟುಕೊಳ್ಳಬೇಕೆಂದೆನಿಸಿದೆ. ಆಗಿನಿಂದ ಸೂರ್ಯನ ಆಕಾರವನ್ನು ಹಣೆಯ ಮೇಲೆ ಧರಿಸುವುದು ನಡೆದಿದೆ. ಸೂರ್ಯನ ಜ್ಞಾನ ತನ್ನ ತಲೆಯಲ್ಲಿ ಇರುವುದಕ್ಕೆ ಸೂರ್ಯನ ಗುರುತನ್ನು ಧರಿಸುತ್ತಿದ್ದೇನೆಂದು ಮನುವು ಇತರರಿಗೆ ಹೇಳಿದ್ದಾನೆ. ಮನುವನ್ನು ನೋಡಿ ಮನುವು ಹೇಳಿದ ಜ್ಞಾನವನ್ನು ಕೇಳಿರುವುದಕ್ಕೆ ಇಕ್ಷ್ವಾಕನೆಂಬ ರಾಜನೂ ಸಹ ಸೂರ್ಯನ ಗುರುತನ್ನು ಹಣೆಯ ಮೇಲೆ ಧರಿಸುವುದೇ ಅಲ್ಲದೆ, ತನ್ನದು ಸೂರ್ಯವಂಶವೆಂದು ಹೇಳಿಕೊಳ್ಳುವುದು ನಡೆದಿದೆ. ವಾಸ್ತವವಾಗಿ ಸೂರ್ಯ ವಂಶ ಎಂದು ಹೇಳಿಕೊಳ್ಳುವುದು ಮಾಯೆವೊಂದರ ಪ್ರಭಾವವೆಂದು ಯಾರಿಗೂ ತಿಳಿದಿಲ್ಲ. ಮಾಯೆಯಿಂದಲೇ ಮನುವಿನ ಬುದ್ಧಿ ಬದಲಾಗಿದೆ. ಸೂರ್ಯನ ಜ್ಞಾನಕ್ಕೆ ಗುರುತಾಗಿ ಮುಖದ ಮೇಲೆ ಸೂರ್ಯನ ಗುರುತನ್ನು ಇಟ್ಟುಕೊಂಡಿದ್ದೇ ನೆಂದು ಹೇಳಿಕೊಳ್ಳುವುದು ಮಾಯೆ ಕೆಲಸವೆಂದು ಯಾರಿಗೂ ತಿಳಿಯದಂತೆ ಹೋಗಿದೆ. ಮನುವು ಸೂರ್ಯನು ತನಗೆ ಜ್ಞಾನವನ್ನು ಹೇಳಿದ್ದಾನೆಂದು ಹೊರಗೆ ಹೇಳಿದರೂ, ತನ್ನ ಒಳಗೆ ಮಾತ್ರ ಜ್ಞಾನ ಹೇಳಿರುವುದು ಸೂರ್ಯನಲ್ಲವೆಂದು, ಜ್ಞಾನ ತಿಳಿದ ಯಾರ ಸೂಕ್ಷ್ಮವೋ ತನಗೆ ಹೇಳಿದೆಯೆಂದು ಅಂದುಕೊಳ್ಳುವುದು ನಡೆದಿದೆ. ತನ್ನ ಅಂತರಂಗದಲ್ಲಿ ಸೂರ್ಯನನ್ನು ಕುರಿತು ಭಾವ ಸ್ವಲ್ಪವೂ ಇಲ್ಲದಿದ್ದರೂ ಮೇಲ್ನೋಟಕ್ಕೆ ಸೂರ್ಯನನ್ನು ಕುರಿತು ಮಾತನಾಡುವಂತೆ ಮಾಯೆ ಮಾಡಿದೆ. ಮನುವು ಹೇಳಿರುವುದನ್ನನುಸರಿಸಿ ಇಕ್ಷ್ವಾಕನು ಇನ್ನೂ ಮುಂತಾದವರೆಲ್ಲರೂ ತಮ್ಮದು ಸೂರ್ಯವಂಶವೆಂದು ಹೇಳಿಕೊಳ್ಳುವುದು ನಡೆದಿದೆ. ಅವರ ಅಂತರಂಗದಲ್ಲಿಯೂ ಸಹ ಸೂರ್ಯನು ಮನುವಿಗೆ ಜ್ಞಾನ ಹೇಳಿದ್ದಾನೆಂಬ ವಿಷಯ ತಿಳಿದಿಲ್ಲ. ಬಲವಂತವಾಗಿ ಮಾಯೆ ಅವರಿಂದ ವಂಶವನ್ನು ಹೇಳುವಂತೆ ಮಾಡಿದೆ. ವಂಶ, ಕುಲ, ಗೋತ್ರ (ಗುಣತ್ರಯ) ಎಲ್ಲಾ ಮಾಯೆ ಆಗುವುದರಿಂದ ಮನುಷ್ಯರನ್ನು ಮಾಯೆಯಲ್ಲಿ ಇರಿಸುವುದಕ್ಕೆ,

ಮಾಯೆ ಸೂರ್ಯನ ಹೆಸರನ್ನು ಬಳಸಿಕೊಂಡು ಅವರಿಗೆ ಹೇಳಿಸಿದೆ ಆದರೆ, ಅವರಿಗೆ ಸೂರ್ಯನು ಜ್ಞಾನ ಹೇಳಿದ್ದಾನೆಂಬ ನಂಬಿಕೆ ಇಲ್ಲ.

ಮನುವು ಮಾತ್ರ ಮಾಯೆಯಿಂದ ತನಗೆ ತಿಳಿಯದ ವಿಷಯವನ್ನು ಆ ಕಾಲದಲ್ಲಿ ಹೇಳಿದರೂ, ಅದು ಪೂರ್ತಿಯಾಗಿ ಮನುವಿಗೇ ನಂಬಿಕೆ ಇಲ್ಲ. ನಂತರ ಇಕ್ಷ್ವಾಕನು ಮನುವನ್ನು ಅನುಸರಿಸಿದರೂ, ಇಕ್ಷ್ವಾಕನಿಗೂ ಸಹ ಒಳಗೆ ಸೂರ್ಯನು ಮನುವಿಗೆ ಜ್ಞಾನ ಹೇಳಿದ್ದಾನೆಂಬ ನಂಬಿಕೆ ಇಲ್ಲ. ಮನುವು ನಂತರ ಯಾರಾಗಲೀ, ಮೂರು ಯುಗಗಳು ನಡೆಯುವವರೆಗು ಸೂರ್ಯನ ಪ್ರಸ್ತಾವಣೆ ಬರಲಿಲ್ಲ. ಸೂರ್ಯನು ಜ್ಞಾನ ಹೇಳಿದ್ದಾನೆಂಬ ವಿಷಯವೇ ಯಾರೂ ಅಂದುಕೊಂಡಿಲ್ಲ ಆದರೇ, ಮಾಯಾ ಪ್ರಭಾವದಿಂದ ಸೂರ್ಯವಂಶದ ಹೆಸರು ಭೂಮಿ ಮೇಲೆ ನಿಂತುಹೋಗಿದೆ. ಕೆಲವು ಯುಗಗಳ ನಂತರ ಕುಲಗಳ ಪ್ರಭಾವ ಹೆಚ್ಚಾಗಿ 'ವಂಶ' ಎಂಬ ಮಾತು ಕಡಿಮೆಯಾಗಿದೆ. ಇದೆಲ್ಲಾ ಮಾಯೆ ನಾಟಕವೇ ಹೊರತು, ಸೂರ್ಯನು ಮನುವಿಗೆ ಜ್ಞಾನ ಹೇಳಿದ್ದಾನೆಂಬ ಮಾತು ಮನುವಿಗೆ ತಿಳಿದಿಲ್ಲ. ಇತರರಿಗೆ ಯಾರಿಗೂ ತಿಳಿದಿಲ್ಲ. ಆದರೇ ಮನುವಿಗೆ ಜ್ಞಾನ ಸೂರ್ಯನಿಂದಲೇ ತಿಳಿದಿದೆ. ಸೂರ್ಯನೇ ಮನುವನ್ನು ಆಯ್ಕೆ ಮಾಡಿಕೊಂಡು ಜ್ಞಾನವನ್ನು ಹೇಳುವುದು ನಡೆದಿದೆ. ಆ ವಿಷಯ ವಾಸ್ತವವಾಗಿ ಮನುವಿಗೆ ತಿಳಿದಿಲ್ಲ. ಮನುವಿಗೆ ಸೂರ್ಯನು ತನ್ನನ್ನು ಕುರಿತು ಹೇಳಲಿಲ್ಲ. ಆ ವಿಷಯವನ್ನು ಮೊದಲೇ ಹೇಳಿದ್ದೇನೆ.

**ಪ್ರಶ್ನೆ :– ದಕ್ಷಿಣ ಭಾರತದೇಶದಲ್ಲಿ ಎಷ್ಟೋ ಜಿಜ್ಞಾಸಿಗಳಿರುವಾಗ, ಮನುವನ್ನು ಒಬ್ಬನನ್ನೇ ಪ್ರತ್ಯೇಕಿಸಿ ಸೂರ್ಯನು ಏಕೆ ಆಯ್ಕೆ ಮಾಡಿಕೊಂಡಿದ್ದಾನೆ?**

**ಉತ್ತರ :–** ಆ ದಿನದಂದು ಸೂರ್ಯನು ಭೂಮಿ ಮೇಲೆ ಜ್ಞಾನವನ್ನು ಹೇಳುವುದಕ್ಕೆ ಮನುವನ್ನೇ ಪ್ರತ್ಯೇಕಿಸಿ ಆಯ್ಕೆ ಮಾಡಿಕೊಳ್ಳುವುದು ನಡೆದಿದೆ. ಆದಿನ ದಕ್ಷಿಣ ಭಾರತದೇಶದಲ್ಲಿ ಮನುವಿನೊಂದಿಗೆ ಎಷ್ಟೋ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಅರ್ಹರಾದವರು ಇದ್ದಾರೆ. ಅವರೆಲ್ಲರನ್ನೂ ಬಿಟ್ಟು ಸೂರ್ಯನು ಮನುವನ್ನೇ

ನಿರ್ಣಯಿಸಿಕೊಳ್ಳುವುದಕ್ಕೆ ಬಲವಾದ ಕಾರಣ ಇದೆ. ಸೂರ್ಯೋದಯದಿಂದಲೇ ಪ್ರತಿ ದಿನ ಪ್ರಾರಂಭವಾದಂತೆ, ಸೂರ್ಯೋದಯದಿಂದಲೆ ಸೃಷ್ಠಿಯೂ ಸಹ ಪ್ರಾರಂಭವಾಗಿದೆಯೆಂದು, ಸೃಷ್ಠಿ ಮೊದಲ ದಿನ ಆದಿವಾರ(ಭಾನುವಾರ) ದಿಂದಲೇ ಪ್ರಾರಭವಾಗಿದೆಯೆಂದು, ಭಾನುವಾರ ಸೂರ್ಯನ ದಿನವೆಂದು ತಿಳಿದು ಸೂರ್ಯನನ್ನು ಗೌರವಿಸುವಹಾಗೆ ಸೂರ್ಯನ ಗೊಂಬೆಯನ್ನು ತನ್ನ ಹಣೆಯ ಮೇಲೆ ಮನುವು ಇಟ್ಟುಕೊಳ್ಳುತ್ತಿದ್ದನು. ಸೂರ್ಯನ ಗುರುತನ್ನು ಅಂದಿನ ಕಾಲದಲ್ಲಿ ಮನುವು ಒಬ್ಬನೇ ಧರಿಸುವುದರಿಂದ ಸೂರ್ಯನ ದೃಷ್ಠಿ ಮನುವಿನ ಮೇಲೆ ಹರಡಿದೆ. ತನ್ನ ಗುರುತನ್ನು ಹಣೆಯ ಮೇಲೆ ಇಟ್ಟುಕೊಂಡವನು ಮನುವು ಒಬ್ಬನೇ ಆಗಿರುವುದರಿಂದ ಎಷ್ಟೋ ಮಂದಿ ಜ್ಞಾನ ಜಿಜ್ಞಾಸಿಗಳಲ್ಲಿ ಮನುವನ್ನು ಮಾತ್ರ ಸೂರ್ಯನು ಆಯ್ಕೆ ಮಾಡಿಕೊಳ್ಳುವುದು ನಡೆದಿದೆ.

**ಪ್ರಶ್ನೆ :– ಸೂರ್ಯನು ಜ್ಞಾನ ಹೇಳಿದ ನಂತರ ಆತನ ಜ್ಞಾನ ನನ್ನ ತಲೆಯಲ್ಲಿ ಇರುವುದರಿಂದ ಗುರುತಾಗಿ ಸೂರ್ಯನ ಗುರುತನ್ನು ಹಣೆಯ ಮೇಲೆ ಇಟ್ಟುಕೊಂಡಿದ್ದಾನೆಂದು ಇದಕ್ಕೂ ಮೊದಲು ಹೇಳಿದ್ದೀರ. ಈಗೇನೋ ಸೂರ್ಯನು ಜ್ಞಾನ ಹೇಳುವುದಕ್ಕಿಂತ ಮೊದಲೇ ಹಣೆಯ ಮೇಲೆ ಸೂಯನ ಗುರುತನ್ನು ಇಟ್ಟುಕೊಂಡಿದ್ದಾನೆಂದು ಹೇಳುತ್ತಿದ್ದೀರ. ಇದರಲ್ಲಿ ಯಾವುದು ನಿಜ?**

**ಉತ್ತರ :–** ಸೂರ್ಯನು ಜ್ಞಾನವನ್ನು ಹೇಳುವುದಕ್ಕಿಂತ ಮೊದಲೇ ಮನುವು ಸೂರ್ಯನ ಆಕಾರವನ್ನು ಹಣೆಯ ಮೇಲೆ ಇಟ್ಟುಕೊಂಡಿದ್ದಾನೆನ್ನುವುದೇ ವಾಸ್ತವವೆಂದು ಹೇಳುತ್ತಿದ್ದೇನೆ. ಸೂರ್ಯನು ಜ್ಞಾನವನ್ನು ಮನುವಿಗೇ ಹೇಳುವುದಕ್ಕೆ ಕಾರಣ ಮನುವಿನ ಮುಖದ ಮೇಲೆ ಸೂರ್ಯನ ಆಕಾರವನ್ನು ಇಟ್ಟುಕೊಳ್ಳುವುದರಿಂದ ಸೂರ್ಯನ ದೃಷ್ಠಿಯನ್ನು ಮನುವು ಆಕರ್ಷಿಸಿದ್ದಾನೆ. ಸೂರ್ಯನ ದೃಷ್ಠಿ ಸೂರ್ಯನ ಗೊಂಬೆಯನ್ನು ಧರಿಸಿದ ಮನುವಿನ ಮೇಲೆ ಬಿದ್ದಿರುವುದರಿಂದ ಮನುವಿಗೇ ಸೂರ್ಯನು ಜ್ಞಾನವನ್ನು ಹೇಳಿದ್ದಾನೆ. ಸೂರ್ಯನು ಜ್ಞಾನ ಹೇಳಿದ ನಂತರ ಮನುವಿನಲ್ಲಿ ಗುಣಗಳ ಮಾಯೆ ಕೆಲಸ ಮಾಡಿರುವುದರಿಂದ, ಮನುವು ತನಗೆ ತಿಳಿಯದಿದ್ದರೂ, ಸೂರ್ಯನು ಜ್ಞಾನವನ್ನು

ಹೇಳಿದ್ದಾನೆಂದು ಹೇಳಿದ್ದಾನೆ. ಸೂರ್ಯನ ವಿಷಯ ತನಗೆ ತಿಳಿಯದಿದ್ದರೂ ತಿಳಿದಿದೆಯೆಂದು ಹೇಳಿದ್ದಾನೆ. ಅದರಿಂದ ಸೂರ್ಯವಂಶ ತಯಾರಾಗಿ ಅಲ್ಲಿಂದ ಕುಲಗಳವರೆಗೂ ಅಜ್ಞಾನ ಹರಡಿದೆ. ಸೂರ್ಯನು ಜ್ಞಾನ ಹೇಳಿದ ನಂತರ ಮನುವಿನಲ್ಲಿ ಮಾಯ ಕೆಲಸ ಮಾಡಿದ ವಿಧಾನದಿಂದ ನಡೆದ ಚರಿತ್ರೆ ಒಂದು ವಿಧವಾಗಿರುವಾಗ, ಅದರಲ್ಲಿ ಸತ್ಯ ಏನಿದೆಯೆಂದು ನೋಡಿದರೇ ಇನ್ನೊಂದು ವಿಧಾನ ಅರ್ಥವಾಗುತ್ತದೆ. ಮಾಯ ಕೆಲಸ ಮಾಡುವುದರಿಂದ ಮನುವು ತನಗೆ ಸೂರ್ಯನು ಜ್ಞಾನ ಹೇಳಿದ್ದಾನೆಂದು ಹೇಳಿರುವುದು ಒಂದು ವಿಧವಾಗಿ ವಾಸ್ತವವೇ ಆದರೂ, ಸತ್ಯದ ಪ್ರಕಾರ ಮನುವಿಗೆ ಸೂರ್ಯನು ಜ್ಞಾನ ಹೇಳಿದ್ದಾನೆಂದು ತಿಳಿದಿಲ್ಲ.

ಮನುವಿಗೆ ತಿಳಿಯದ ವಿಷಯವನ್ನು, ನಡೆದ ಸತ್ಯವನ್ನೇ ಮನುವಿನಿಂದ ಹೇಳಿಸಿ ಮನುವು ಸತ್ಯವೇ ಹೇಳಿದ್ದಾನಲ್ಲವೆ! ಎಂದೆನಿಸಿ, ಸೂರ್ಯನ ಗುರುವಾಗಿ ಮನುವು ಹೇಳಿದಂತೆ ಮಾಯೆ ಮಾಡಿರುವುದರಿಂದ ಎಲ್ಲರಿಗೂ ಮನುವು ಸತ್ಯವಚನನಾಗಿ ಇರುವಂತೆ ಕಾಣಿಸಿದ್ದಾನೆ. ಮನುವಿಗೆ ವಾಸ್ತವವಾಗಿ ಸೂರ್ಯನು ಜ್ಞಾನ ಹೇಳಿದ ವಿಷಯ ತಿಳಿದಿಲ್ಲ. ಆದರೂ ಮಾಯೆ ಮನುವಿನಿಂದ ಮನುವಿಗೆ ತಿಳಿಯದ ಸತ್ಯವನ್ನು ತಿಳಿದಂತೆ ಹೇಳಿಸಿ, ಮನುವಿನಿಂದ ಒಂದು ವಂಶದ ಹೆಸರನ್ನು ಹೊರಗೆ ತಂದಿದೆ. ವಂಶದಿಂದ ಕೊನೆಗೆ ಕುಲದವರೆಗು ಮನುಷ್ಯರು ಸೀಳಿಹೋಗುವಂತೆ ಮಾಡಿದೆ. ಮಾಯ ಮನುಷ್ಯರನ್ನು ದೇವರ ಮಾರ್ಗದಿಂದ ತಪ್ಪಿಸಿ ಅಜ್ಞಾನ ಮಾರ್ಗದಲ್ಲಿ ಪಯಣಿಸುವುದಕ್ಕೆ ಮನುವಿನಿಂದ ಮನುವಿಗೆ ತಿಳಿಯದ ಸತ್ಯವನ್ನು ಹೇಳಿಸಿ ತನ್ನ ಪ್ರಭಾವವನ್ನು ಮನುಷ್ಯರ ಮೇಲೆ ತೋರಿಸಿ ಮನುಷ್ಯರು ಕುಲಗಳಾಗಿ ಸೀಳಿಹೋಗುವಂತೆ ಮಾಡಿದೆ. ನಾವು ಮಾಯೆ ಹೀಗೆ ಮಾಡಿದೆಯೆಂದು ಹೇಳದೇ ಆಗ ನಡೆದ ಚರಿತ್ರೆಯನ್ನು ಹೇಳಿದ್ದೇನೆ. ಆ ಸಮಯದಲ್ಲಿ ಹಾಗೆ ಹೇಳುವುದೇ ಅವಶ್ಯ. ಆಗ ಸತ್ಯವನ್ನು ಹೇಳಿದರೇ ಅದು ಅಸಂದರ್ಭಪ್ರಲಾಪವಾಗುತ್ತದೆ. ಆದ್ದರಿಂದ ಮೊದಲು ಸೂರ್ಯನು ಜ್ಞಾನ ಹೇಳಿರುವ ವಿಷಯ ಮನುವಿಗೆ ತಿಳಿದಿದೆಯೆಂದು ಹೇಳಿದ್ದೇವೆ. ಆಗ

ಹೇಳಿದಾಗ ಹಿಂದೆ ಅಡಗಿರುವ ವಿಷಯವನ್ನು ಹೇಳಲಿಲ್ಲ. ಸೂರ್ಯನು ಮನುವಿಗೆ ಜ್ಞಾನ ಹೇಳಿರುವುದು ಸತ್ಯವೇ ಆಗುವುದರಿಂದ ನಾವೂ ಸಹ ಮಾಯೆ ವಿಧಾನವನ್ನೇ ಹೇಳುತ್ತಾ ಹೋಗಿದ್ದೇವೆ. ಮನುವಿಗೆ ಸೂರ್ಯನು ಜ್ಞಾನವನ್ನು ಹೇಳಿರುವುದು ಸತ್ಯವೇ. ಆದರೇ ಆ ವಿಷಯ ಮನುವಿಗೆ ತಿಳಿದಿದೆ ಎಂಬ ವಿಷಯ ಮಾತ್ರ ಅಸತ್ಯ. ಸೂರ್ಯನು ಮನುವಿಗೆ ಜ್ಞಾನ ಹೇಳಿದ್ದಾನಾ! ಇಲ್ಲವಾ! ಎಂಬ ವಿಷಯ ಆಗ ಮುಖ್ಯವಲ್ಲ ಆದ್ದರಿಂದ ಆ ಸಮಯಕ್ಕೆ ಅರ್ಥವಾಗುವಂತೆ ಮಾಯೆ ಮಾಡಿದ ವಿಧಾನವನ್ನೇ ನಾವು ಹೇಳಿದ್ದೇವೆ. ಈಗ ಸತ್ಯಾಸತ್ಯ ವಿವರ ಅವಶ್ಯವಾದ್ದರಿಂದ ತಪ್ಪದೆ ಸತ್ಯವನ್ನು ಹೇಳಬೇಕಾಯಿತು.

ಮನುವಿನಿಂದ ಮನುವಿಗೆ ತಿಳಿಯದ ಸತ್ಯವನ್ನು, ತಿಳಿದ ಸತ್ಯವಾಗಿ ಹೇಳಿಸಿ ಮನುವನ್ನು ಮುಖ್ಯವಾದ ಮನುಷ್ಯನಾಗಿ ತೋರಿಸಿದ ಮಾಯೆ, ಮನುವಿನಿಂದಲೇ ವಂಶವನ್ನು ಬರುವಂತೆ ಮಾಡಿ ಕೊನೆಗೆ ಕುಲಗಳವರೆಗು ಸೀಳಿಹೋಗುವಂತೆ ಮಾಡಿದೆ. ನಂತರ ಅಲ್ಲಿಗೆ ನಿಲ್ಲದೆ ಮನುಷ್ಯರನ್ನು ದೈವ ಮಾರ್ಗದ ಕಡೆಗೆ ಹೋಗದಂತೆ ಮಾಡುವುದಕ್ಕೆ ಮನುವಿನಿಂದ ಕೆಲವು ಧರ್ಮಗಳನ್ನು ಹೇಳಿಸಿದೆ. ಅವೆಲ್ಲವೂ ದೈವಜ್ಞಾನವಾಗಿ ಕಾಣಿಸುವಂತೆ ಮಾಡಿ ಅವುಗಳನ್ನೇ ಮನುಷ್ಯರು ಆಚರಿಸುವಂತೆ ಮಾಡಿದೆ. ದೇವರು ಹೇಳಿದ ಧರ್ಮಗಳಲ್ಲದೆ, ಮನುವು ಸ್ವತಃವಾಗಿ ಧರ್ಮಗಳು ಹೇಳುವುದರಿಂದ ಮನುವು ಹೇಳಿದ ಧರ್ಮಗಳನ್ನು 'ಮನುಧರ್ಮಶಾಸ್ತ್ರ' ಎಂದು ಅನ್ನುತ್ತಿದ್ದಾರೆ. ಮನುಧರ್ಮಶಾಸ್ತ್ರದಿಂದ ಮನುಷ್ಯರು ದೇವರ ಧರ್ಮಗಳ ಕಡೆಗೆ ಹೋಗ ದಂತಿರುವುದಕ್ಕೆ ಅವಕಾಶ ಇದೆ. ಆದ್ದರಿಂದ ಆ ಕಾಲದಲ್ಲಿ ಮನುಷ್ಯರು ಮನು ಧರ್ಮಶಾಸ್ತ್ರವನ್ನು ಅನುಸರಿಸುತ್ತಿದ್ದರು. ಮನು ಧರ್ಮಶಾಸ್ತ್ರ ಅಂದಿನ ಕಾಲದಲ್ಲಿ ಪ್ರಚಾರವಾದರೂ, ಈಗಲೂ ಸಹ ಮನು ಧರ್ಮಗಳು ಮನುಷ್ಯರಲ್ಲಿದ್ದರೂ ಇವು ಮನು ಧರ್ಮಗಳು ಎಂದು ಮನುಷ್ಯರಿಗೆ ತಿಳಿದಿಲ್ಲ. ಮನುಷ್ಯರಿಗೆ ತಿಳಿಯದಂತೆ ಮನು ಧರ್ಮಗಳು ದೇವರ ಧರ್ಮಗಳಾಗಿ ಆಚರಿಸಲ್ಪಡುತ್ತಿದ್ದರೂ, ಅವು ಮನುಷ್ಯರಿಗೆ ತಿಳಿಯದೆ ಹೋಗುವುದರಿಂದ ಭಗವದ್ಗೀತೆಯಲ್ಲಿನ ದೇವರ

ಧರ್ಮಗಳನ್ನು ಮನುಷ್ಯ ಗುರುತಿಸದಂತಿದ್ದಾನೆ. ಮನುಷ್ಯ ಮಾಯ ಪ್ರಭಾವದಿಂದ ದೇವರ ಕಡೆ ಅಲ್ಲದೆ ಪ್ರಕೃತಿ ಕಡೆ ಹೋಗುತ್ತಿದ್ದಾನೆ.

**ಪ್ರಶ್ನೆ :– ಮನು ಧರ್ಮಶಾಸ್ತ್ರ ಎಂಬ ಹೆಸರನ್ನು ಕೇಳಿದ್ದೇವೆ ಆದರೆ, ಮನು ಧರ್ಮ ಶಾಸ್ತ್ರವನ್ನು ಎಲ್ಲಿಯೂ ನೋಡಲಿಲ್ಲವೇ. ಅಷ್ಟಕ್ಕೂ ಮನು ಧರ್ಮ ಶಾಸ್ತ್ರವೆನ್ನುವುದು ಪ್ರತ್ಯೇಕವಾಗಿ ಇದೆಯಾ?**

**ಉತ್ತರ :–** ಮನು ಧರ್ಮ ಶಾಸ್ತ್ರವೆನ್ನುವುದು ಹೆಸರು ಮಾತ್ರ ಇದೆ. ವಾಸ್ತವಕ್ಕೆ ಅದು ಶಾಸ್ತ್ರವೇ ಅಲ್ಲ. ಏಕೆಂದರೇ! ಅದರಲ್ಲಿ ಶಾಸ್ತ್ರೀಯತೆ ಇಲ್ಲ. ಆದರೂ ಮೊದಲಿನಿಂದ ಎಲ್ಲರೂ ಅದನ್ನು ಶಾಸ್ತ್ರವೆಂದು ಕರೆಯುತ್ತಿದ್ದಾರೆ. ಮನು ಧರ್ಮ ಎನ್ನುವದನ್ನು ಮನುವು ಸ್ವತಃವಾಗಿ ಹೇಳುವುದರಿಂದ ಅದಕ್ಕೆ ಆ ಹೆಸರು ಬರುವುದು ನಡೆದಿದೆ. ಮನುವು ಶರೀರದಲ್ಲಿನ ಮಾಯೆ, ಮನುವಿನಿಂದ ಸೂರ್ಯನು ಹೇಳಿದ ಜ್ಞಾನವಲ್ಲದೆ ತನ್ನ ಸ್ವಂತ ಜ್ಞಾನವನ್ನು ಹೇಳಿಸಿದೆ. ಮೊದಲು ಮನುವು ಸೂರ್ಯನು ಹೇಳಿದ ಜ್ಞಾನವನ್ನೇ ಇಕ್ಷ್ವಾಕನು ಇನ್ನೂ ಕೆಲವರಿಗೆ ಹೇಳಿದ್ದಾನೆ. ನಂತರ ಬಹಳ ಜನರಿಗೆ ತನ್ನ ಮೇಲೆ ಒಳ್ಳೆಯ ಅಭಿಪ್ರಾಯ ಬರುವುದರಿಂದ ತನ್ನಲ್ಲಿ ಮಾಯೆ ಕೆಲಸ ಮಾಡಿ ತನಗಂತೂ ಪ್ರತ್ಯೇಕವಾದ ಹೆಸರು ಭೂಮಿ ಮೇಲೆ ಇರಬೇಕೆಂದು ಅಂದುಕೊಂಡಿದ್ದಾನೆ. ಆದ್ದರಿಂದ ಸೂರ್ಯನು ಹೇಳಿದ ಜ್ಞಾನವಲ್ಲದೆ ತನ್ನ ಹೆಸರಿಂದ ಹೊಸ ಧರ್ಮಗಳನ್ನು ಬೋಧಿಸಿದನು. ಆಗ ಮನುವು ಹೇಳಿದ ಧರ್ಮಗಳೇ ಇಂದಿನವರೆಗೂ 'ಮನು ಧರ್ಮಶಾಸ್ತ್ರ' ಎಂದು ಪ್ರತ್ಯೇಕವಾದ ಹೆಸರಿನಿಂದ ಹೇಳಲಾಗುತ್ತಿದೆ. ಮನು ಧರ್ಮಶಾಸ್ತ್ರವೆನ್ನುವುದು ಹೇಳಲಾಗಿರುವುದೇ ಹೊರತು, ಬರೆಯಲಾಗಿರುವುದಲ್ಲ. 'ಜಪರ' ಎಂಬ ಹೆಸರಿರುವ ಬೋಧನೆ ಹೇಳಲಾಗಿರು ವುದೇ, ಬರೆಯಲಾಗಿರುವುದಲ್ಲವೆಂದು ಹೇಗೆ ಹೇಳಿಕೊಂಡಿದ್ದೇವೋ, ಹಾಗೆಯೇ ಮನು ಧರ್ಮಶಾಸ್ತ್ರವೆನ್ನುವುದು ಗ್ರಂಥವಾಗಲಿಲ್ಲ. ಮನುವು ಹೇಳಿರುವವು ಧರ್ಮಗಳಲ್ಲ, ಆದರೂ ಮಾಯ ಪ್ರಭಾವದಿಂದ ಧರ್ಮಗಳಾಗಿ ಹೇಳಲ್ಪಡುತ್ತಿವೆ. ಹಾಗೆಯೇ ಮನುವು ಹೇಳಿರುವುದು ಶಾಸ್ತ್ರವೇ ಅಲ್ಲ, ಆದರೂ ಮಾಯಾ ಬಲದಿಂದ ಶಾಸ್ತ್ರವಾಗಿ ಹೇಳಲ್ಪಡುತ್ತಿದೆ.

**ಪ್ರಶ್ನೆ :– ದೇವರು ಎಷ್ಟೋ ಶ್ರಮದಿಂದ ತನ್ನ ಜ್ಞಾನವನ್ನು ಮೂರು ವಿಧಗಳಲ್ಲಿ, ಮೂರು ಮಾರ್ಗಗಳಿಂದ ಮನುಷ್ಯರಿಗೆ ಹೇಳಿಸಿದಾಗ, ಮಾಯ ದೇವರ ಜ್ಞಾನಕ್ಕೆ ವಿರುದ್ಧವಾಗಿ ಅಧರ್ಮಗಳನ್ನು ಏಕೆ ಬೋಧಿಸುವಂತೆ ಮಾಡುತ್ತಿದೆ? ದೇವರಿಗೆ ವಿರುದ್ಧ ಮಾಡಬಾರದೆಂದು ಮಾಯೆಗೆ ತಿಳಿದಿಲ್ಲವಾ?**

**ಉತ್ತರ :–** ದೇವರು ಪತಿಯಾದಾಗ, ಪ್ರಕೃತಿ ಪತ್ನಿಯಾಗಿ ಇದೆ. ಪ್ರಕೃತಿವೊಂದರ ಎರಡನೆಯ ಆಕಾರವೇ ಮಾಯೆ. ಪ್ರಕೃತಿ ಮಾಯೆ ರೂಪವಾಗಿ ಇದ್ದರೂ ಮಾಯೆ ದೇವರ ಪತ್ನಿಯಾಗುವುದರಿಂದ ಮಾಯೆ ದೇವರಿಗೆ ಯಾವ ಕಾರಣಕ್ಕೂ ವಿರುದ್ಧವಲ್ಲವೆಂದು ಹೇಳಬಹುದು. ದೇವರಿಗೆ ಎಲ್ಲಾ ರೀತಿಯಲ್ಲಿ ಸಹಕರಿಸುತ್ತಾ, ಬಹಳ ವಿಧೇಯತೆಯಿಂದಿರುವವರಲ್ಲಿ ಮೊದಲನೆಯದು ಮಾಯೆಯೆಂದೇ ಹೇಳಬಹುದು. ಬಹಳ ವಿನಯವಾಗಿ ಇರುವ ಮಾಯೆ ದೇವರಿಗೆ ವಿರುದ್ಧವಾಗಿ ಎಂದಿಗೂ ನಡೆಯುವುದಿಲ್ಲ. **ಮಾಯೆ ಮಾನವರನ್ನು ಮಾತ್ರವೇ ತಪ್ಪುದಾರಿ ಹಿಡಿಸುತ್ತಿದೆ. ಅಷ್ಟೇ ಹೊರತು ಪ್ರಜೆಗಳನ್ನು ತಪ್ಪುದಾರಿ ಹಿಡಿಸಲಿಲ್ಲ. ಪ್ರಜೆಗಳನ್ನು ದೈವಮಾರ್ಗದಲ್ಲಿ ನಡೆಯುವಂತೆ ಮಾಡುತ್ತಿದೆ.** ಆದರೇ ಮಾನವರನ್ನು ಮಾತ್ರ ಅದೇ ಕೆಲಸದಂತೆ ತಪ್ಪುದಾರಿ ಹಿಡಿಸಿ ದೈವಮಾರ್ಗದಿಂದ ದೂರವಾಗುವಂತೆ ಮಾಡುತ್ತಿದೆ. ಪ್ರಜೆಗಳೆಂದರೇ ದೇವರಿಗೆ ಇಷ್ಟ. ಮಾನವರೆಂದರೇ ದೇವರಿಗೆ ಇಷ್ಟವಿಲ್ಲ. ದೇವರಿಗೆ ಇಷ್ಟವಿಲ್ಲದವರನ್ನು ಆತನ ಹತ್ತಿರಕ್ಕೆ ಹೋಗದಂತಿರುವುದಕ್ಕೆ, ಅವರನ್ನು ತಪ್ಪುದಾರಿ ಹಿಡಿಸುವುದಕ್ಕೆ ಮಾಯೆ ಅದೇ ಕೆಲಸದಂತೆ ಅವರಿಗೆ ಅಜ್ಞಾನವನ್ನು ಬೋಧಿಸುತ್ತಿದೆ. ಮಾಯೆ ತನ್ನ ಪತಿಯಾದ ದೇವರ ಮಾತನ್ನು ಅನುಸರಿಸಿಯೇ ಹಾಗೆ ಮಾಡುತ್ತಿದೆ. ಮಾಯೆಯ ವಿಷಯ ತಿಳಿಯದವರು ಎಲ್ಲರೂ ಮಾಯೆ ದೇವರಿಗೆ ವಿರುದ್ಧವಾಗಿರುವುದೆಂದು ಅಂದುಕೊಳ್ಳುತ್ತಾರೆ. ಮಾಯೆಯನ್ನು ಕುರಿತು ಪೂರ್ತಿ ತಿಳಿದ ನಂತರ ಯಾರೂ ಮಾಯೆ ಕೆಟ್ಟದೆಂದು, ದೇವರಿಗೆ ವಿರೋಧಿ ಎಂದು ಅಂದುಕೊಳ್ಳುವುದಿಲ್ಲ. ಮಾಯೆ ಮಾತ ದೇವರ ಸೇವಕಿ ಎಂದು ಯಾರೂ ಮರೆಯಬಾರದು.

**ಪ್ರಶ್ನೆ :- ಮಾಯ ವಿಷಯವನ್ನು ಬಿಟ್ಟು ಮೊದಲು ನೀವೇ ನಮ್ಮ ಪಾಲಿಗೆ ಮಾಯೆ ಆಗಬಾರದೆಂದು ಕೋರುತ್ತಿದ್ದೇವೆ. ಏಕೆ ಹಾಗೆ ಕೇಳುತ್ತಿದ್ದೇವೆಂದರೇ ಭೂಮಿ ಮೇಲೆ ಇರುವ ಮನುಷ್ಯರನ್ನು ಮಾನವರೆಂದು, ಪ್ರಜೆಗಳೆಂದು ಎಲ್ಲರೂ ಅನ್ನುತ್ತಿರುವಾಗ ಕೇಳಿದ್ದೇವೆ. ಈಗ ಮೊಟ್ಟಮೊದಲಬಾರಿ ನೀವೇ ಮಾನವರನ್ನು, ಪ್ರಜೆಗಳನ್ನು ಬೇರೆಬೇರೆಯಾಗಿ ವಿಭಜಿಸಿ ಅದರಲ್ಲಿ ಮಾನವರು ದೇವರಿಗೆ ಇಷ್ಟವಿಲ್ಲವೆಂದೂ, ಪ್ರಜೆಗಳು ಮಾತ್ರವೇ ಇಷ್ಟವೆಂದು ಹೇಳಿದ್ದೀರ. ದೇವರಿಗೆ ಮನುಷ್ಯರೆಲ್ಲರೂ ಸಮಾನವೇ ಎಂದು ಹೇಳುವುದನ್ನು ಕೇಳಿದ್ದೇವೆ. ಆದರೇ ಈಗ ನೀವು ಮಾತ್ರವೇ ಮನುಷ್ಯರನ್ನು ಎರಡು ವಿಧಗಾಳಗಿ ಮಾನವರು, ಪ್ರಜೆಗಳೆಂದು ವಿಭಜಿಸಿದ್ದೀರ. ಪ್ರಜೆಗಳೆಂದರೂ, ಮಾನವರೆಂದರೂ ಮನುಷ್ಯರೇ ಅಲ್ಲವೆ! ಹಾಗಿರುವಾಗ ಮಾನವರು ದೇವರಿಗೆ ಸರಿಹೋಗದಂತೆ ಇರುವುದೇನು? ಮಾನವರು ಸರಿಹೋಗದಿರುವಾಗ, ಮಾನವರ ಮೇಲೆ ದೇವರಿಗೆ ಇಷ್ಟವಿಲ್ಲದಿರುವಾಗ ಪ್ರಜೆಗಳ ಮೇಲೆ ಇಷ್ಟ ಹೇಗೆ ಉಂಟಾಗಿದೆ. ನಿಮ್ಮ ಮಾತು ನಂಬುವಂತದ್ದೇನಾ? ನೀವು ಸಂಚಲನಾತ್ಮಕ ಬೋಧಕರು ನಿಮ್ಮ ಮಾತನ್ನು ಅಲ್ಲ ಎನ್ನಲಾರೆವು, ಹೌದೆಂದು ಹೇಳಲಾರೆವು. ಹೇಗೂ ಹೇಳಲಾರೆವು. ನೀವು ಯಾವುದಕ್ಕಾದರೂ ಉತ್ತರ ಹೇಳಬಲ್ಲಿರಿ. ಈ ವಿಷಯದಲ್ಲಿ ನಮಗಿರುವ ಸಂಶಯವನ್ನು ಈಡೇರಿಸೆಂದು ವಿನಯ ವಿಧೇಯತೆಯಿಂದ ಕೇಳುತ್ತಿದ್ದೇವೆ.**

**ಉತ್ತರ :-** ವಿನಯವಿಲ್ಲದೆ ಕೇಳಿದವರಿಗೂ ಸಹ ಉತ್ತರವನ್ನು ಹೇಳಿದ್ದೇವೆ. ಈಗ ನೀನು ವಿನಯದಿಂದ ಕೇಳುತ್ತಿದ್ದರೆ ನಾನು ಹೇಳದಂತಿರುವೆನಾ? ನೀನು ಕೇಳಿದ ಸಂಶಯದಿಂದ ಕೂಡಿಕೊಂಡ ಪ್ರಶ್ನೆಗೆ ತಪ್ಪದೆ ಉತ್ತರವನ್ನು ಹೇಳುತ್ತೇನೆ ಜಾಗರೂಕತೆಯಿಂದ ಕೇಳು. ಮನುಷ್ಯರಲ್ಲಿ ಒಂದು ವಿಧ ಪ್ರಜೆಗಳು, ಮತ್ತೊಂದು ವಿಧ ಮಾನವರು ಇರುವುದು ವಾಸ್ತವವೆ. ಆದರೇ ಆ ವಿಷಯ ಈದಿನ ಯಾರಿಗೂ ತಿಳಿಯದಂತೆ ಹೋಗಿದೆ. ಅಂತಹ ವಿಷಯವನ್ನು ಈಗ ನಾನು ಹೇಳುವುದು ನಿಮಗೆ ಒಂದು ವಿಚಿತ್ರವಾಗಿಯೇ ಇರುತ್ತದೆ. ಈಗ ನಾನು ಹೇಳದೇ ಹೋದರೇ ನನ್ನ ನಂತರ ಯಾರೂ ಹೇಳುವವರು ಇಲ್ಲ. ಆದ್ದರಿಂದ

ಈಗಲೇ ಆ ವಿಷಯವನ್ನು ವಿವರವಾಗಿ ಹೇಳಬೇಕೆಂದುಕೊಂಡಿದ್ದೇನೆ. ನನ್ನ ಮಾತುಗಳಿಂದ ನಿನಗಿರುವ ಸಂಶಯ ಸಂಪೂರ್ಣವಾಗಿ ತೀರಿದಂತಾಗುತ್ತದೆ. ಭೂಮಿ ಮೇಲೆ ಹುಟ್ಟಿರುವ ಜನರಲ್ಲಿ ಮನುಷ್ಯರು, ಮಾನವರು, ಪ್ರಜೆಗಳು ಎಂಬ ಮೂರು ವಿಧದವರಿದ್ದಾರೆ. ಶರೀರದಲ್ಲಿ ಮನಸ್ಸಿರುವುದರಿಂದ ಎಲ್ಲರನ್ನು ನೇರವಾಗಿ ಮನುಷ್ಯರು ಎಂದು ಹೇಳಬಹುದು. ಮನಸ್ಸಿರುವವನು 'ಮನುಷ್ಯ' ಎಂದು ಹೇಳಲ್ಪಡುತ್ತಿದ್ದಾನೆ. ಎಲ್ಲರಿಗೂ ಮನಸ್ಸಿರುವುದರಿಂದ ಎಲ್ಲರನ್ನೂ ಸೇರಿಸಿ 'ಮನುಷ್ಯರು' ಎನ್ನುತ್ತಿದ್ದೇವೆ. ಆದರೇ ಮನುಷ್ಯರಲ್ಲಿ ಮಾನವರು ಇದ್ದಾರೆ. ಹಾಗೆಯೇ ಪ್ರಜೆಗಳೂ ಇದ್ದಾರೆ. ಮಾನವರು ಹಾಗೂ ಪ್ರಜೆಗಳು ಇಬ್ಬರೂ ಆಕಾರದಲ್ಲಿ ಒಂದೇ ವಿಧದಲ್ಲಿ ಇರುವುದರಿಂದ ಯಾರು ಪ್ರಜೆಗಳೋ! ಯಾರು ಮಾನವರೋ! ಹೊರಗೆ ತಿಳಿಯದಂತೆ ಹೋಗಿದೆ.

ಯಾರಾದರೂ ತಪ್ಪು ಕೆಲಸ ಮಾಡಿದರೆ ಅವನನ್ನು ದೂಷಿಸು ವಾಗ ನೀನು ಮನುಷ್ಯನಾ? ಎಂದು ದೂಷಿಸುವುದು ನಡೆಯುತ್ತಿದೆ. ಅಷ್ಟೇ ಅಲ್ಲದೆ ನಿನಗೆ ಮಾನವತ್ವವಿದೆಯಾ? ಎಂದು ಸಹ ಅನ್ನುತ್ತಿರುತ್ತಾರೆ. ಅಷ್ಟೇ ಹೊರತು ನೀನು ಪ್ರಜೇನಾ? ಎಂದು ಯಾರೂ ಅನ್ನುವುದಿಲ್ಲ. ಏಕೆಂದರೇ! **'ಪ್ರಜೆ'** ಪದ ಪ್ರತ್ಯೇಕವಾದುದು. ಒಂದು ದಿನ ಸುಮಾರು ಹತ್ತು ಸಂವತ್ಸರಗಳ ಕೆಳಗೆ ತೆಲಂಗಾಣಾ ಪ್ರಾಂತದಲ್ಲಿ ಒಬ್ಬ ವ್ಯಕ್ತಿ ವ್ಯಾಪಾರವನ್ನು ಮಾಡುತ್ತಿದ್ದಾನೆ. ಆ ವ್ಯಕ್ತಿ ತನ್ನ ಹತ್ತಿರವಿರುವ ಒಂದು ಆಟೋಮೊಬೈಲ್ ವಸ್ತುವನ್ನು ಇನ್ನೊಬ್ಬನ ಅವಶ್ಯಕತೆಗಾಗಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಿದ್ದಾನೆ. ಆ ವಸ್ತು ಎಲ್ಲಿಯೂ ಇಲ್ಲವೆಂದು ತನ್ನ ಹತ್ತಿರವೇ ಇರುವುದರಿಂದ ನೂರು ರೂಪಾಯಿಗಳ ವಸ್ತುವನ್ನು ಹತ್ತು ಪಟ್ಟು ಹೆಚ್ಚಿನ ಬೆಲೆಗೆ ಸಾವಿರ ರೂಪಾಯಿಗಳಿಗೆ ಮಾರುವುದು ನಡೆದಿದೆ. ಸ್ವಲ್ಪ ಸಮಯ ಕಳೆದ ನಂತರ ಒಬ್ಬ ದೊಡ್ಡ ಮನುಷ್ಯ ಅಲ್ಲಿಗೆ ಬರುವುದು ನಡೆದಿದೆ. ಅಂಗಡಿ ಯಜಮಾನ ತನ್ನ ವ್ಯಾಪಾರದಲ್ಲಿ ನೂರು ರೂಪಾಯಿಗಳ ವಸ್ತುವನ್ನು ಸಾವಿರ ರೂಪಾಯಿಗಳಿಗೆ ಮಾರುವುದನ್ನು ತಿಳಿದು, ಆ ವ್ಯಕ್ತಿ ಅಷ್ಟು ಅನ್ಯಾಯ ಮಾಡಿರುವುದನ್ನು ತಿಳಿದುಕೊಂಡ ದೊಡ್ಡ ಮನುಷ್ಯ ಆ

ವ್ಯಾಪಾರಸ್ತನನ್ನು ದೂಷಿಸುತ್ತಾ 'ನಿನಗೆ ಮಾನವತ್ವವಿದೆಯಾ? ಎಂದನು. ಅದಕ್ಕೆ ಆ ವ್ಯಾಪಾರಸ್ತನು ಹೀಗೆಂದನು "ನನಗೆ ಮಾನವತ್ವವಿದೆಯೆಂದು ಯಾರು ಹೇಳಿದ್ದಾರೆ? ನನಗೆ ಮಾನವತ್ವವಿಲ್ಲ, ನಿಮಗೇ ಮಾನವತ್ವವಿದೆ, ನೀವೇ ಮಾನವರು. ನಾನು ಮಾನವನಲ್ಲ, ನನಗೆ ಮಾನವತ್ವವಿಲ್ಲ. ನಾನು ಒಬ್ಬ ಮನುಷ್ಯನೇ ಆದರೂ ಮಾನವನು ಮಾತ್ರ ಅಲ್ಲ" ಎಂದು ಹೇಳುವುದು ನಾವು ಕೇಳಿ ಬಹಳ ಆಶ್ಚರ್ಯಪಟ್ಟೆವು.

ಎರಡು ದಿನಗಳ ನಂತರ ನಾನು ಆ ವ್ಯಾಪಾರಸ್ಥನನ್ನು ಭೇಟಿಮಾಡಿ ನನಗೆ ಬಂದಿರುವ ಅನುಮಾನವನ್ನು ಕೇಳಿದ್ದೇನೆ. ಆಗ ನಾನು ಮಾತನಾಡುತ್ತಾ "ಒಬ್ಬ ದೊಡ್ಡ ಮನುಷ್ಯ ನಿಮ್ಮನ್ನು ನಿನಗೆ ಮಾನವತ್ವವಿದೆಯಾ! ಎಂದು ದಂಡಿಸಿದಾಗ ನಾನು ಮನುಷ್ಯನೇ ಆದರೂ ಮಾನವನು ಮಾತ್ರ ಅಲ್ಲ ಎಂದಿದ್ದೀಯ. ನೀನು ಮನುಷ್ಯನಾಗಿರುವುದು ನಿಜವೇ, ಹಾಗೆಯೇ ಮಾನವನಾಗುವುದು ಸಹ ನಿಜವೇ ಅಲ್ಲವೇ! ಎಂದು ಕೇಳಿದ್ದೇನೆ. ಅದಕ್ಕೆ ಆ ವ್ಯಕ್ತಿ ಸಮಾಧಾನವನ್ನು ಹೇಳುತ್ತಾ "ನನಗೆ ಮನಸ್ಸಿದೆ ಆದ್ದರಿಂದ ಮನುಷ್ಯನೆಂದು ಹೇಳಿದ್ದೇನೆ. ಮನಸ್ಸಿರುವವನು ಮನುಷ್ಯ ಎಂಬ ನಿರ್ವಚನದ ಪ್ರಕಾರ ನಾನು ಮನುಷ್ಯನು ಎಂದು ಹೇಳುವುದರಲ್ಲಿ ತಪ್ಪಿಲ್ಲ. ಆದರೇ ಪಶುಗಳಲ್ಲಿ ಎತ್ತಿಗೂ, ಕೋಣಕ್ಕೂ ಎಷ್ಟೋ ವ್ಯತ್ಯಾಸ ಇದ್ದಂತೆ ಮನುಷ್ಯರಲ್ಲಿಯೂ ಪ್ರಜೆಗಳಿಗೂ, ಮಾನವರಿಗೂ ಎಷ್ಟೋ ವ್ಯತ್ಯಾಸವಿದೆ. ಕಪ್ಪು ಎತ್ತುಗಳು, ಕಪ್ಪು ಬಣ್ಣದಲ್ಲಿರುವ ಕೋಣಗಳು ಬೆರೆತುಹೋದಂತೆ ಪ್ರಜೆಗಳು, ಮಾನವರು ಬೆರೆತು ಹೋಗಿ ಗುರುತಿಸುವುದಕ್ಕೆ ಸಾಧ್ಯವಿಲ್ಲದಂತಿದ್ದಾರೆ. ಎತ್ತುಗಳನ್ನು, ಕೋಣಗಳನ್ನು ಎರಡನ್ನೂ ಸೇರಿಸಿ ಪಶುಗಳು ಎಂದು ಹೆಸರಿಟ್ಟಂತೆ, ಪ್ರಜೆಗಳನ್ನು ಮಾನವರನ್ನು ಇಬ್ಬರನ್ನೂ ಸೇರಿಸಿ ಮನುಷ್ಯರು ಎಂದು ಅನ್ನುತ್ತಿದ್ದಾರೆ. ಒಂದೇ ಹೆಸರಿರುವ ಪಶುಗಳಲ್ಲಿ ಎತ್ತುಗಳು, ಕೋಣಗಳು ಯಾವ ವಿಧದಲ್ಲಿ ಬೇರೆಬೇರೆ ಜಾತಿಯಾಗಿ ಇವೆಯೋ, ಹಾಗೆಯೇ ಒಂದೇ ಹೆಸರಿರುವ ಮನುಷ್ಯರಲ್ಲಿ ಪ್ರಜೆಗಳು, ಮಾನವರು ಬೇರೆಬೇರೆ ಭಾವನೆಗಳು ಇರುವವರಾಗಿದ್ದಾರೆ. ಎತ್ತುಗಳು ಕೆಸರನ್ನು ನೋಡಿದರೆ

ದೂರದಲ್ಲಿರುತ್ತವೆ. ಕೋಣಗಳು ಕೆಸರನ್ನು ನೋಡಿದರೆ ಆನಂದಪಟ್ಟು ಶರೀರವೆಲ್ಲಾ ಬಳೆದುಕೊಳ್ಳುತ್ತವೆ. ಅದೇ ರೀತಿ ಪ್ರಜೆಗಳು ಮಾನವರು ಬೇರೆಬೇರೆ ಬುದ್ಧಿಗಳು ಹೊಂದಿದ್ದಾರೆಂದು ಹೇಳಬಹುದು.

ಪೂರ್ವದಲ್ಲಿ ಸೂರ್ಯನು ಭೂಮಿಮೇಲೆ ಜ್ಞಾನವನ್ನು ಮನುವಿನಿಂದ ತಿಳಿಸಿದ್ದಾನೆ. ಮನುವು ತನಗೆ ಸೂರ್ಯನಿಂದ ತಿಳಿದ ಜ್ಞಾನವನ್ನು ಇತರರಿಗೆ ತಿಳಿಸಿದಾಗ ದೇವರ ಜ್ಞಾನ ಭೂಮಿಯಮೇಲೆ ಪೂರ್ತಿ ಹರಡಿಹೋಗಿದೆ. ಹಾಗೆ ತಿಳಿದ ಜ್ಞಾನವನ್ನು ಕೆಲವರು ಬಹಳ ಕೇವಲವಾಗಿ ನೋಡುತ್ತಾ, ಅವಹೇಳನವಾಗಿ ಮಾತನಾಡುತ್ತಿದ್ದರು. ಹಾಗೆ ಅವಹಾಳನವಾಗಿ ಮಾತನಾಡುವ ವರನ್ನು ನೋಡಿದ ಮಾಯ ಅವರು ದೇವರ ಕಡೆ ಹೋಗದಂತಿರುವುದಕ್ಕೆ ಅಜ್ಞಾನವನ್ನು ಜ್ಞಾನದ ಹಾಗೆ ತಿಳಿಸಿ, ಅಜ್ಞಾನದ ಮೇಲೆ ಅವರಿಗೆ ಇಷ್ಟ ಹುಟ್ಟುವಂತೆ ಮಾಡಿ ಅವರನ್ನು ಅಜ್ಞಾನದ ಕಡೆ ಹೋಗುವಂತೆ, ಜ್ಞಾನದ ಕಡೆ ಬಾರದಂತೆ ಮಾಡಬೇಕೆಂದುಕೊಂಡಿದೆ. ಮಾಯೆ ಹಾಗೆ ಅಂದುಕೊಂಡ ಕೂಡಲೇ ಮನುವಿನಲ್ಲಿನ ಭಾವನೆಯನ್ನು ಬದಲಾಯಿಸಿದೆ. ತಾನು ಹೇಳಿದ ಜ್ಞಾನವನ್ನು ಎಲ್ಲರೂ ಕೇಳಬಲ್ಲರೆಂದು, ತನ್ನ ಹೆಸರು ಶಾಶ್ವತವಾಗಿ ಭೂಮಿ ಮೇಲೆ ಇರುವಂತೆ ಮಾಡಿಕೊಳ್ಳಬೇಕೆಂದುಕೊಂಡಿದ್ದಾನೆ. ಆಗ ಮನುವು ಸ್ವತಃವಾಗಿ ಜ್ಞಾನವನ್ನು ಬೋಧಿಸಿ, ಸ್ವತಃವಾಗಿ ಧರ್ಮಗಳನ್ನು ತೋರಿಸಿ, ತನ್ನ ಬೋಧನೆಗೆ ಶಾಸ್ತ್ರವೆಂಬ ಹೆಸರನ್ನು ಸೇರಿಸಿ ಮನು ಧರ್ಮಶಾಸ್ತ್ರವೆಂದು ಹೆಸರು ಇಟ್ಟಿದ್ದಾನೆ.

ಮಾಯ ಪ್ರೇರೇಪಿತದಿಂದ ಮನುವು ತನ್ನ ಹೆಸರಿನ ಮೇಲೆ ಮನುಧರ್ಮ ಶಾಸ್ತ್ರವೆಂಬ ಬೋಧನೆಯನ್ನು ಹೇಳಿಹೋಗಿದ್ದಾನೆ. ಆ ದಿನ ಮನುಧರ್ಮ ಶಾಸ್ತ್ರ ಗ್ರಂಥರೂಪವಾಗಲಿಲ್ಲ. ಬೋಧರೂಪದಲ್ಲಿರುವ ಮನುಧರ್ಮಶಾಸ್ತ್ರ ಭೂಮಂಡಲವೆಲ್ಲಾ ಹರಡಿಹೋಯಿತು. ಮಾಯ ಮಾಡಿದ ಕೆಲಸದಿಂದ ಶಾಸ್ತ್ರವಲ್ಲದ ಅಶಾಸ್ತ್ರ ಶಾಸ್ತ್ರವಾಗಿ, ಧರ್ಮವಲ್ಲದ ಅಧರ್ಮ ಧರ್ಮವಾಗಿ ಭೂಮಿಯ ಮೇಲೆ ಹರಡಿಹೋಗಿದೆ. ಮನು ಧರ್ಮಶಾಸ್ತ್ರದಲ್ಲಿನವು ಇಂತಹ ಧರ್ಮಗಳೆಂದು ಯಾರೂ ಹೇಳದಿದ್ದರೂ ಅವು ಮಾತ್ರ ಮನುಷ್ಯರ ಮಧ್ಯದಲ್ಲಿ

ತಿಳಿಯದಂತೆ ಉಳಿದುಹೋಗಿವೆ. ಈದಿನ ಭೂಮಿಯಮೇಲೆ ಆಚರಣೆ ರೂಪದಲ್ಲಿರುವ ಯಜ್ಞಗಳು, ವೇದಪಠನಗಳು, ದಾನಗಳು, ತಪಸ್ಸುಗಳು (ಧ್ಯಾನಗಳು) ಮುಂತಾದವು ಮನು ಧರ್ಮದೊಳಗಿನವೆಂದು ಯಾರಿಗೂ ತಿಳಿದಿಲ್ಲ. ಈ ದಿನ ಮನು ಧರ್ಮಗಳೆಂದು ತಿಳಿಯದಿದ್ದರೂ, ನಾಲ್ಕು ವಿಧಗಳಾಗಿರುವ ಯಜ್ಞ, ದಾನ, ವೇದ, ತಪಸ್ಸುಗಳನ್ನು ಬಹಳ ಜನ ಆಚರಿಸುತ್ತಿದ್ದಾರೆ. ದೇವರು ಆಕಾಶವಾಣಿಯಿಂದ ಸೂರ್ಯನಿಗೆ ಹೇಳಿದ ಜ್ಞಾನದಲ್ಲಿ ಮನುವು ಸ್ವತಃವಾಗಿ ಹೇಳಿದರೂ ನಾಲ್ಕು ವಿಧಾನಗಳು ಇಲ್ಲ. ದೇವರು ದೈವಧರ್ಮಗಳನ್ನು ಆಕಾಶದಿಂದ ಹೇಳಿಸಿದ್ದಾನೆ. ಮನುವು ಪ್ರಕೃತಿ ಧರ್ಮಗಳನ್ನು ದೈವಧರ್ಮಗಳಿಗೆ ವಿರುದ್ಧವಾಗಿ ಇರುವ ಅಧರ್ಮಗಳನ್ನು ಧರ್ಮಗಳಾಗಿ ಬೋಧಿಸುವುದು ನಡೆದಿದೆ. ಈ ರೀತಿ ದೇವರು ಆಕಾಶದಿಂದ ಬೋಧಿಸಿದ ದೈವ ಧರ್ಮಗಳು, ಪ್ರಕೃತಿ ಮನುವಿನಿಂದ ಬೋಧಿಸಿದ ಅಧರ್ಮಗಳು ಎರಡು ಭೂಮಿ ಮೇಲೆ ಎರಡು ವರ್ಗಗಳಾಗಿ ಸೀಳಿಹೋಗಿವೆ. ಮನುಷ್ಯರು ಶೇಕಡಕ್ಕಿಂತ ಹೆಚ್ಚು ಮಂದಿ ಮನು ಧರ್ಮಗಳಾದ ಧರ್ಮಗಳಲ್ಲದ ಅಧರ್ಮಗಳಿಗೆ ಅಭ್ಯಾಸವಾಗಿದ್ದಾರೆ. ದೇವರ ಧರ್ಮಗಳಿಗೆ ಅಭ್ಯಾಸವಾದವರು ಬಹಳ ಕಡಿಮೆ ಇದ್ದಾರೆ. ಭೂಮಿ ಮೇಲೆ ದೈವಧರ್ಮಗಳನ್ನು ಹೇಳಿದ ಮೊದಲ ಬೋಧಕನು ಮನುವೇ. ಹಾಗೇ ಭೂಮಿ ಮೇಲೆ ಅಧರ್ಮಗಳನ್ನು ಹೇಳಿದ ಮೊದಲ ಬೋಧಕನು ಮನುವೆ. ಹಾಗೆಯೇ ಭೂಮಿಯ ಮೇಲೆ ಅಧರ್ಮಗಳನ್ನು ಹೇಳಿದ ಮೊದಲ ಬೋಧನು ಮನುವೇ. ಒಂದೇ ಶರೀರವಿರುವ ಒಬ್ಬ ಮನುವೇ ಎರಡು ವಿಧಗಳ ಜ್ಞಾನ, ಅಜ್ಞಾನ ಬೋಧನೆಗಳನ್ನು ಹೇಳುವುದು ನಡೆದಿದೆ. ಮೊದಲು ದೈವ ಧರ್ಮಗಳನ್ನು ಹೇಳಿದ ಮನುವು ನಂತರ ಮಾಯ ಪ್ರೇರೇಪಿಸಿದ ಅಧರ್ಮಗಳನ್ನು ಬೋಧಿಸಿದ ಬೋಧಕನಾಗಿ ಉಳಿದಿದ್ದಾನೆ.

ಮನುವು ಸೂರ್ಯನು ಹೇಳಿದ ಜ್ಞಾನವನ್ನೇ ಇತರ ಪ್ರಜೆಗಳಿಗೆ ಹೇಳಿದ್ದಾನೆಂದು ಭಗವದ್ಗೀತೆ ಆಧಾರವಾಗಿ ಎಲ್ಲರಿಗೂ ತಿಳಿದಿದೆ. ಆದರೇ ಮನುವು ಅಧರ್ಮಗಳನ್ನು ಸಹ ಹೇಳಿದ್ದಾನೆಂದು ಮಾತ್ರ ತಿಳಿದಿಲ್ಲ. ಮನುವು

ಮೊದಲು ಧರ್ಮಗಳನ್ನು ಬೋಧಿಸಿ ನಂತರ ಅದೇ ಮನುವು ಅಧರ್ಮಗಳನ್ನು ಬೋಧಿಸಿದ್ದಾನೆ ಅಂದರೇ ಯಾರೂ ಕೇಳುವ ಪರಿಸ್ಥಿತಿಯಲ್ಲಿ ಇಲ್ಲ. ಆದರೂ ಮನುವು ಧರ್ಮಗಳನ್ನು, ಅಧರ್ಮಗಳನ್ನು ಬೋಧಿಸಿದ್ದಾನೆಂದು ತಿಳಿಯದೆ ಹೋಗಿರುವುದರಿಂದ ತಮಗೆ ತಿಳಿಯದಂತೇ ಅಧರ್ಮಗಳ ಕಡೆ ಮನುಷ್ಯರು ಹೋಗುವುದು ನಡೆದಿದೆ. ಧರ್ಮಗಳು ದೇವರವು ಆದಾಗ, ಅಧರ್ಮಗಳು ಮಾಯೆಯಿಂದ ಬಂದಿರುವವು. ಮನುಷ್ಯನಿಗಿರುವ ಶ್ರದ್ಧೆಯನ್ನನುಸರಿಸಿ ಅವನಿಗೆ ದೈವಧರ್ಮಗಳಾಗಲೀ, ಮಾಯ ಅಧರ್ಮಗಳಾಗಲೀ ಲಭಿಸುತ್ತಿವೆ. ದೈವೀಕವಾದ ಶ್ರದ್ಧೆ ಮನುಷ್ಯನಲ್ಲಿರುವಾಗ ದೈವ ಧರ್ಮಗಳು ಲಭಿಸುತ್ತಿವೆ. ಹಾಗೆಯೇ ಪ್ರಕೃತಿ ಶ್ರದ್ಧೆ ಇರುವಾಗ ಅವನಿಗೆ ಅಧರ್ಮಗಳೇ ಸಿಗುತ್ತವೆ. ಅಧರ್ಮಗಳನ್ನು ಆಶ್ರಯಿಸಿದವನು ಮನುವು ವೊಂದರ ಅಧರ್ಮಗಳನ್ನು ಆಚರಿಸಿದವನಾಗುತ್ತಾನೆ. ಹಾಗೆಯೇ ಧರ್ಮಗಳನ್ನು ಆಶ್ರಯಿಸಿದವನು ದೈವಧರ್ಮಗಳನ್ನು ಆಚರಿಸಿ ದವನಾಗುತ್ತಾನೆ.

ಇಲ್ಲಿ ಅಸಲು ವಿಷಯಕ್ಕೆ ಬಂದು ನೋಡಿದರೆ ಮನುವಿನ ಧರ್ಮಗಳನ್ನು ಆಚರಿಸಿದವನು ಯಾರಾದರೂ ಅವನನ್ನು **'ಮಾನವನು'** ಎನ್ನುವುದು ಪೂರ್ವದಲ್ಲಿ ನಡೆಯುತ್ತಿತ್ತು. ಹಾಗೆಯೇ ದೇವರ ಧರ್ಮಗಳನ್ನು ಆಚರಿಸಿದವನನ್ನು **'ಪ್ರಜ'** ಎಂದು ಅನ್ನಲಾಗಿದೆ. ಪೂರ್ವದಲ್ಲಿ ದೇವರ ಧರ್ಮಗಳನ್ನು ಆಚರಿಸುವವರು ಹೆಚ್ಚಾಗಿ ಇರುತ್ತಿದ್ದರು. ಆದ್ದರಿಂದ ಅವರೆಲ್ಲರನ್ನೂ "ಪ್ರಜೆಗಳು" ಎಂಬ ಹೆಸರಿಂದ ಕರೆಯುತ್ತಿದ್ದರು. ಮನುವುವೊಂದರ ಧರ್ಮಗಳನ್ನು ಅನುಸರಿಸುವವರು ಬಹಳ ಕಡಿಮೆ ಮಂದಿ ಇರುತ್ತಿದ್ದರು. ಆದ್ದರಿಂದ ಅವರನ್ನು "ಮಾನವರು" ಎಂದು ಕರೆಯುತ್ತಿದ್ದರು. ಪೂರ್ವದಲ್ಲಿ ಭೂಮಿಮೇಲಿರುವ ಮನುಷ್ಯರಲ್ಲಿ ಪ್ರಜೆಗಳು ಹೆಚ್ಚಾಗಿ ಇರುತ್ತಿದ್ದರು. ಮಾನವರು ಕಡಿಮೆ ಸಂಖ್ಯೆಯಲ್ಲಿ ಇರುತ್ತಿದ್ದರು. ಯುಗಗಳು ಬದಲಾದಂತೆಲ್ಲಾ, ಕಾಲ ಕಳೆದಂತೆಲ್ಲಾ ಪ್ರಜೆಗಳು ಕಡಿಮೆಯಾಗಿದ್ದಾರೆ. ಮಾನವರು ಹೆಚ್ಚಾಗಿದ್ದಾರೆ. ಪೂರ್ವಕ್ಕಿಂತ ಈಗಲೇ ಮನುಷ್ಯರ ಸಂಖ್ಯೆ ಹೆಚ್ಚಾಗಿದ್ದರೂ ಅದರಲ್ಲಿ ಪ್ರಜೆಗಳು ಅಪರೂಪವಾಗಿದ್ದಾರೆ. ಎಲ್ಲಿ ನೋಡಿದರೂ ಮಾನವರೇ

ಕಾಣಿಸುತ್ತಿದ್ದಾರೆ. ದೇವರ ಧರ್ಮಗಳು ಈದಿನ ಇಲ್ಲದಂತೆ ಹೋಗಿ ಎಲ್ಲಿ ನೋಡಿದರೂ ಮನುವು ಧರ್ಮಗಳೇ ಕಾಣಿಸುತ್ತಿವೆ. ಮನು ಧರ್ಮಗಳೇ ದೇವರ ಧರ್ಮಗಳಾಗಿ ಹೇಳಲ್ಪಡುತ್ತಿವೆ. ದೇವರ ಧರ್ಮಗಳು ತಿಳಿಯದಂತೆ ಹೋಗಿವೆ. ಎಲ್ಲಾದರೂ ದೇವರ ಧರ್ಮಗಳು ಅಪರೂಪವಾಗಿ ಕಾಣಿಸಿದರೂ ಅವುಗಳನ್ನು ಪರಮತ ಧರ್ಮಗಳೆಂದು ಹಿಂದೂಗಳೇ ಅವಹೇಳನ ಮಾಡುತ್ತಿದ್ದಾರೆ. ಅಷ್ಟೋ ಇಷ್ಟೋ ನನ್ನ ಹತ್ತಿರ ದೈವಜ್ಞಾನವಿರುವುದರಿಂದ ನನ್ನನ್ನು 'ಮಾನವನು' ಎಂದು ಅನ್ನಬಾರದೆಂದಿದ್ದೇನೆ. ಮನು ಧರ್ಮಗಳನ್ನು ಅನುಸರಿಸುವವರು ಮಾನವರಾಗುತ್ತಾರೆ. ನಾನು ಮನು ಧರ್ಮಗಳನ್ನು ಅನುಸರಿಸುತ್ತಿಲ್ಲ. ಆದ್ದರಿಂದ ನಾನು ಮಾನವನು ಹೇಗೆ ಆಗುತ್ತೇನೆ. ನಾನು ದೈವ ಧರ್ಮಗಳನ್ನೇ ಅನುಸರಿಸುತ್ತಿದ್ದೇನೆ ಆದ್ದರಿಂದ "ಪ್ರಜ" ಎಂಬ ಹೆಸರು ನನಗೆ ಸರಿಯಾದದ್ದು. ಮಾನವ ಎಂಬ ಹೆಸರು ನನಗೆ ಸರಿಹೊಂದುವುದಿಲ್ಲ. ಆದ್ದರಿಂದ ನನ್ನನ್ನು ದಂಡಿಸಿದ ದೊಡ್ಡ ಮನುಷ್ಯನೊಂದಿಗೆ ನನಗೆ ಮಾನವತ್ವವಿಲ್ಲ, ನಾನು ಮಾನವನು ಅಲ್ಲ ಎಂದು ಜೋರಾಗಿ ಹೇಳಿದ್ದೇನೆ. ಇಂದಿನ ಕಾಲದಲ್ಲಿ ಮಾನವನಿಗು, ಪ್ರಜೆಗಳಿಗು ಅರ್ಥ ತಿಳಿಯದಿರುವುದರಿಂದ ನಾನು ಹೇಳಿದ ಮಾತು ನಿಮಗೆ ಅರ್ಥವಾಗಲಿಲ್ಲ. ನಿಮಗೇ ಅಲ್ಲ ಈದಿನ ದೊಡ್ಡ ಜ್ಞಾನಿಗಳೆಂದುಕೊಂಡವರಿಗೂ ಸಹ ಮಾನವರಿಗೂ ಪ್ರಜೆಗಳಿಗೂ ವ್ಯತಾಸ ತಿಳಿದಿಲ್ಲ." ಎಂದು ಆತನು ಹೇಳಿದಾಗ ನಾನು ಕೇಳಿದ್ದೇನೆ. ನಾನು ಆತನನ್ನು ಕೇಳಿರುವುದರಿಂದ ಈಗ ನಿಮಗೂ ಸಹ ಸ್ವಲ್ಪ ಅರ್ಥವಾಗಿದೆಯೆಂದುಕೊಳ್ಳುತ್ತೇನೆ.

**ಪ್ರಶ್ನೆ :– ಆತನು ಯಾರೋ ನಮಗೆ ತಿಳಿದಿಲ್ಲ ಆದರೇ, ಈಗ ನೀವು ಹೇಳಿದಾಗ ನಾವು ಕೇಳಿದ್ದೇವೆ. ಆತನನ್ನು ಬಿಟ್ಟು ನಿಮ್ಮನ್ನು ಒಂದು ಪ್ರಶ್ನೆ ಕೇಳುತ್ತಿದ್ದೇವೆ. ಅದು ಏನೆಂದರೇ! ಮನು ಧರ್ಮಗಳನ್ನು ಆಚರಿಸಿದವರು ಮಾನವರಾದರೇ ಈದಿನ ಭೂಮಿ ಮೇಲೆ ಎಷ್ಟೋ ದೊಡ್ಡ ಜ್ಞಾನಿಗಳಾಗಿ ಹೇಳಲ್ಪಡುವವರೆಲ್ಲರೂ ಯಾವುದೋ ಸಮಯದಲ್ಲಿ, ಎಲ್ಲೋ ಒಂದು ಕಡೆ ಯಜ್ಞಗಳನ್ನು ಮಾಡುತ್ತಿದ್ದಾರೆ.**

**ಯಜ್ಞಗಳನ್ನೇ ಅಲ್ಲ ಮನುವು ಹೇಳಿದ ಉಳಿದ ಮೂರು ಧರ್ಮಗಳನ್ನು ಸಹ ಆಚರಿಸುತ್ತಿದ್ದಾರೆ. ಅವರನ್ನು ಏನನ್ನಬೇಕು ಅಜ್ಞಾನಿಗಳೆನ್ನಬೇಕಾ, ಜ್ಞಾನಿ ಗಳೆನ್ನಬೇಕಾ?**

**ಉತ್ತರ :–** ಈ ದಿನ ಭೂಮಿ ಮೇಲೆ ಮನುಧರ್ಮಗಳನ್ನು ಆಚರಿಸುವವರೇ ಜ್ಞಾನಿಗಳಾಗಿ ಹೇಳಲ್ಪಡುತ್ತಿದ್ದಾರೆ. ಜ್ಞಾನಿಗಳಾಗಿ ಗೌರವಿಸಲ್ಪಡುತ್ತಿದ್ದಾರೆ. ಯಾರು ಹೇಗೆ ಇದ್ದರೂ ಸೂತ್ರದ ಪ್ರಕಾರ ಅವರು ಮನುಧರ್ಮಗಳನ್ನು ಆಚರಿಸುತ್ತಿದ್ದಾರೆ, ಆದ್ದರಿಂದ ಅವರನ್ನು ಮಾನವರೆಂದು ಹೇಳಬಹುದು. ಮನುವು ಭೂಮಿಯಮೇಲೆ ಮೊದಲು ಧರ್ಮಗಳನ್ನು ಹೇಳಿದ್ದಾನೆ ನಂತರ ಅಧರ್ಮ ಗಳನ್ನು ಹೇಳಿದ್ದಾನೆ. ಮನುವು ಮೊದಲು ಹೇಳಿದ ಧರ್ಮಗಳನ್ನು ಅನುಸರಿಸುವವರು ಜ್ಞಾನಿಗಳಾಗುವರು. ಮನುವು ಸ್ವಲ್ಪ ಕಾಲ ಕಳೆದ ನಂತರ ಎರಡನೆ ಬಾರಿ ಹೇಳಿದ ಧರ್ಮಗಳನ್ನು ಅನುಸರಿಸುವವರನ್ನು ಅಜ್ಞಾನಿಗಳೆಂದು ಅನ್ನಬೇಕು. ಒಬ್ಬರಿಬ್ಬರನ್ನಾದರೇ ಹಾಗೆ ಅಜ್ಞಾನಿಗಳೆಂದು ಹೇಳಿ, ಅವರನ್ನು ಒಳ್ಳೆಯ ದಾರಿಗೆ ತರಬಹುದು. ಹಾಗಲ್ಲದೆ ಭೂಮಿಯಮೇಲೆ ಶೇ. 90ರಷ್ಟು ಮನುಷ್ಯರು ಅವರಿಗೆ ತಿಳಿಯದಂತೆಯೇ ಮನು ಧರ್ಮಗಳನ್ನು ಆಚರಿಸುತ್ತಿದ್ದಾರೆ. ಹಾಗಿರುವಾಗ ಅಷ್ಟು ಜನರನ್ನು ಅಜ್ಞಾನಿಗಳೆಂದರೇ, ಅಂದವರನ್ನು ಸುಮ್ಮನೆ ಬಿಡುವುದಿಲ್ಲ. ತಮ್ಮನ್ನು ಅಜ್ಞಾನಿಗಳೆಂದು ಅಂದಿರುವುದಕ್ಕೆ ಅಂದವನನ್ನು ಯಾವುದೋ ಒಂದು ರೀತಿಯಲ್ಲಿ ಹಿಂಸಿಸುವರು. ನಿಜ ಹೇಳಿ ಕಷ್ಟಗಳನ್ನು ಮೈಮೇಲೆ ಹಾಕಿಕೊಳ್ಳುವುದಕ್ಕಿಂತ, ಅಸತ್ಯವನ್ನು ಸತ್ಯವೇಯೆಂದು ಒಪ್ಪಿಕೊಂಡು ಅವರಿಂದ ದೂರವಾಗಿ ಇರುವುದು ಒಳ್ಳೆಯದು.

ಬುದ್ಧಿ ಕುಶಲತೆ ಇರುವವರು ತಾವು ಅಧಿಕರಾದರೂ, ಇತರರು ಕಡಿಮೆಯವರಾದರೂ ಅವರನ್ನೇ ಅಧಿಕರಾಗಿ ಹೇಳಿ, ತಮ್ಮನ್ನು ತಾವೇ ಕಡಿಮೆ ಮಾಡಿಕೊಳ್ಳುತ್ತಿರುವರು. ಸಮಯ ಸಂದರ್ಭವನ್ನನುಸರಿಸಿ ಬುದ್ಧಿ ಇರುವವರು ಹಾಗೆ ಮಾಡುತ್ತಿರುವರೆಂದು ವೇಮನ ಯೋಗಿ ತನ್ನ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

**ಅನುವುಗಾನಿ ಚೋಟ ಅಧಿಕುಲಮನರಾದು**
**ಕೊಂಚಮುಂಡುಟೆಲ್ಲ ಕೊದುವ ಕಾದು**
**ಕೊಂಡ ಯದ್ದಮಂದು ಕೊಂಚಮೈ ಯುಂಡದಾ**
**ವಿಶ್ವದಾಭಿರಾಮ ವಿನುರ ವೇಮ.**

**ಭಾವಾರ್ಥ :–** ಬುದ್ಧಿಯುತುರು ಸಮಯ ಸಂದರ್ಭಕ್ಕೆ ಅನುಗುಣವಾಗಿ ಪ್ರವರ್ತಿಸುತ್ತಿರುವರು. ಅವರು ಅನುಕೂಲತೆ ಇಲ್ಲದ ಕಡೆ ಸಾಮಾನ್ಯರಾಗಿಯೇ ಇರುವರು. ಗುಡ್ಡ ಎಷ್ಟು ದೊಡ್ಡದಾದರೂ ಕನ್ನಡಿಯಲ್ಲಿ ಚಿಕ್ಕದಾಗಿಯೇ ಕಾಣಿಸುವಂತೆ, ಜ್ಞಾನಿಗಳು ಎಷ್ಟು ದೊಡ್ಡವರಾದರೂ ಅಜ್ಞಾನಿಗಳ ಮುಂದೆ ತಮ್ಮನ್ನು ತಾವು ತಗ್ಗಿಸಿಕೊಂಡು ಚಿಕ್ಕದಾಗಿಯೇ ಕಾಣಿಸುತ್ತಿರುವರು.

**ಪ್ರಶ್ನೆ :– ಮನು ಧರ್ಮಶಾಸ್ತ್ರದಲ್ಲಿನ ಆಚರಣೆಗಳನ್ನು ತಿಳಿದು ಆಚರಿಸಿದರೂ, ತಿಳಿಯದೆ ಆಚರಿಸಿದರೂ ಅವರು ಮಾನವರೇ ಆಗುತ್ತಾರೆ. ಆದರೇ ದೈವ ಧರ್ಮಗಳನ್ನು ಸಹ ಮನುವೇ ಹೇಳಿದ್ದಾನೆ. ಮನುವು ಹೇಳಿದವುಗಳನ್ನು ಆಚರಿಸುವುದರಿಂದ ಮಾನವರಾದರೇ, ಮನುವೇ ದೈವಧರ್ಮಗಳನ್ನು ಸಹ ಹೇಳಿದ್ದಾನಲ್ಲವೆ! ಮನುವಿನಿಂದ ಹೇಳಲಾಗಿರುವ ದೈವ ಧರ್ಮಗಳನ್ನು ಆಚರಿಸುವವರನ್ನು ಪ್ರತ್ಯೇಕವಾಗಿ "ಪ್ರಜೆಗಳು" ಎನ್ನುವುದರಲ್ಲಿ ಅರ್ಥವೇನಾದರೂ ಇದೆಯಾ?**

**ಉತ್ತರ :–** ಮನುವು ಎಂಬ ಮನುಷ್ಯನಿಂದ ಜ್ಞಾನವನ್ನು ಭೂಮಿಮೇಲೆ ಮನುಷ್ಯರಿಗೆ ಹೇಳಿಸಿದರೂ, ಜ್ಞಾನ ದೇವರ ಹತ್ತಿರದಿಂದ ಆಕಾಶದ ಮೂಲಕ, ಸೂರ್ಯನ ಮೂಲಕ ಮನುವಿಗೆ ತಿಳಿದಿದೆ. ಜ್ಞಾನವೊಂದರ ಮೊದಲ ಸ್ಥಾನ ದೇವರೇ ಆದರೂ ನಂತರ ಆಕಾಶ, ಸೂರ್ಯನು ಎಂಬ ಎರಡು ಸ್ಥಾನಗಳು ಬದಲಾಗಿ ನಾಲ್ಕನೆ ಸ್ಥಾನವಾದ ಮನುವು ಹತ್ತಿರಕ್ಕೆ ಸೇರಿದೆ. ಮನುವಿನಿಂದ ಐದನೆ ಸ್ಥಾನವಾದ ಮನುಷ್ಯರಿಗೆ ಸೇರಿದೆ. ಆದರೇ ನಾಲ್ಕನೇ ಸ್ಥಾನವಾದ ಮನುವಿನ ಹತ್ತಿರ ಮಾಯೆ ಕೆಲಸಮಾಡಿದೆ. ದೇವರ ಜ್ಞಾನವನ್ನು ಮನುವು

ಮನುಷ್ಯರಿಗೆ ಬೋಧಿಸಿದ ನಂತರ ಮಾಯ ಮನುವಿನೊಳಗೆ ಕೆಲಸ ಮಾಡಿ, ದೇವರ ಜ್ಞಾನಕ್ಕೆ ವಿರುದ್ಧವಾದ ಅಧರ್ಮಗಳನ್ನು ಅಭಿವೃದ್ಧಿ ಮಾಡಿದೆ. ಮೊದಲು ದೇವರ ಜ್ಞಾನವನ್ನು ಬೋಧಿಸಿದ ಮನುವು ನಂತರ ಅಧರ್ಮಗಳನ್ನು ಬೋಧಿಸಿದ್ದಾನೆ. ಮೊದಲು ಬೋಧಿಸಿದ ಧರ್ಮಗಳು ದೇವರ ಹತ್ತಿರದಿಂದ ಬಂದಿರುವವಾದಾಗ, ನಂತರ ಬೋಧಿಸಿದ ಅಧರ್ಮಗಳ ಮೊದಲ ಸ್ಥಾನ ಮಾಯ ಆದಾಗ, ಎರಡನೆಯ ಸ್ಥಾನ ಮನುವೇ ಎಂದು ಹೇಳಬಹುದು. ಮನುವು ಐದನೇ ಸ್ಥಾನದಲ್ಲಿದ್ದು ಬೋಧಿಸಿದ ದೇವರ ಧರ್ಮಗಳನ್ನು ಕೇಳಿದವರು ಕೆಲವರಿರುವಾಗ, ಮನುವು ಎರಡನೆ ಸ್ಥಾನದಲ್ಲಿದ್ದು ಬೋಧಿಸಿದ ಮಾಯ ಧರ್ಮಗಳನ್ನು ಕೇಳಿದವರು ಸಹ ಕೆಲವರಿದ್ದಾರೆ. ಈ ರೀತಿ ಮನುಷ್ಯರಲ್ಲಿ ಮನುವಿನಿಂದ ದೈವಧರ್ಮಗಳನ್ನು ಕೇಳಿದವರು ಒಂದು ಗುಂಪಾದರೆ, ಅದೇ ಮನುವಿನಿಂದ ಮಾಯ ಧರ್ಮಗಳನ್ನು ಕೇಳಿದವರು ಮತ್ತೊಂದು ಗುಂಪಾಗಿ ನಿಂತುಹೋಗಿದ್ದಾರೆ.

ಮನುವು ಹೇಳಿದ ದೇವರ ಧರ್ಮಗಳನ್ನು, ಮಾಯ ಧರ್ಮಗಳನ್ನು ಎರಡನ್ನೂ ಕೇಳಿದವರು ಮನುಷ್ಯರೇ ಆದರೂ, ಮನುಷ್ಯರು ಕೇಳಿದ ಬೋಧನೆಯನ್ನನುಸರಿಸಿ ಎರಡು ವಿಧಗಳಾಗಿ ಸೀಳಿಹೋಗುವುದು ನಡೆದಿದೆ. ಮಾಯ ಮನುವಿನಿಂದ ಧರ್ಮಗಳನ್ನು ಹೇಳಿಸಿದರೂ, ಮಾಯ ನಾನು ಹೇಳಿದ್ದೇನೆಂದು ಎಲ್ಲಿಯೂ ಹೇಳದೇ ಹೋಗಿರುವುದರಿಂದ, ಅದನ್ನು ಮನುವೇ ಸ್ವತಃವಾಗಿ ಹೇಳಿದಂತಾಗಿದೆ. ಆದ್ದರಿಂದ ಮಾಯ ಧರ್ಮಗಳನ್ನು ಮನು ಧರ್ಮಗಳೇ ಎಂದು ಹೇಳಬೇಕಾಗಿದೆ. ಮನುವು ಹೇಳಿದ ಮನು ಧರ್ಮಗಳನ್ನು ಕೇಳಿ ಅನುಸರಿಸಿದವರನ್ನು, ಮನುವು ಹೆಸರೊಂದಿಗೆ ಹುಟ್ಟಿದ 'ಮಾನವ' ಎಂಬ ಹೆಸರಿರುವವರಾಗಿ ಮಾನವರಾಗಿ ಹೇಳಲಾಗಿದೆ. ಮನುಷ್ಯರಲ್ಲಿ ಒಂದು ಗುಂಪು ಮಾನವರಾಗಿ ಸೀಳಿಹೋದಾಗ, ಎರಡನೆಯ ಗುಂಪಾಗಿ ದೇವರ ಧರ್ಮಗಳನ್ನು ಕೇಳಿ ಆಚರಿಸುವವರೆಂದು ಹೇಳಬೇಕಾಗಿ ಬಂದಿದೆ. ಮನುಷ್ಯರಿಗೆ ಒಂದು ಗುಂಪು ಮಾನವರಾದಾಗ, ಮತ್ತೊಂದು ಗುಂಪಿನ ಹೆಸರು ಪ್ರಜೆಗಳೆಂದು

ಹೇಳುತ್ತಿದ್ದೇವೆ. ಮಾನವರ ಹಿಂದೆ ಮನುವಿರುವುದರಿಂದ ಮಾನವರೆಂದು ಅರ್ಥ ಹೇಳುತ್ತಿದ್ದೇವೆ. ಹಾಗೆಯೇ ಪ್ರಜೆಗಳ ಹಿಂದೆಯೂ ಸಹ ಯಾವುದೋ ಒಂದು ಅರ್ಥ ತಪ್ಪದೆ ಒಳಗೊಂಡಿರುತ್ತದೆ. ಅದನ್ನು ಬಿಡಿಸಿ ನೋಡಿದರೆ ಈ ರೀತಿ ತಿಳಿಯುತ್ತದೆ. "ಪ್ರಜ" ಎಂಬ ಎರಡು ಅಕ್ಷರಗಳಲ್ಲಿ 'ಜ' ಎಂದರೇ ಹುಟ್ಟುವುದೆಂದು ಅರ್ಥವಿದೆ. 'ಪ್ರ' ಎಂದರೇ ಮುಖ್ಯವಾದ ಸಾರಾಂಶವಾದ ಎಂದು ಅರ್ಥ ಇದೆ.

ಯಾರಾದರೇ ದೇವರ ಧರ್ಮಗಳನ್ನು ತಿಳಿಯುತ್ತಾನೋ ಅವನ ಜನ್ಮ ಸಾರಾಂಶವಾದ ಜನ್ಮವಾಗಿ ಬದಲಾಗುತ್ತಿದೆ. ಆದ್ದರಿಂದ ದೈವ ಧರ್ಮಗಳನ್ನು ತಿಳಿದವರನ್ನು 'ಪ್ರಜೆಗಳು' ಎಂದು ಹೇಳಬೇಕಾಯಿತು. ದೈವಧರ್ಮಗಳನ್ನು ತಿಳಿದವನ ಜನ್ಮ ಸಾರ್ಥಕವಾಗುವುದರಿಂದ ಅಂತಹವರನ್ನು ಮುಖ್ಯವಾದ ಜನ್ಮಗಳು ಇರುವವರೆಂದು, ಅಥವಾ ಸಾರಾಂಶವಾದ ಜನ್ಮ ಇರುವವರೆಂದು ಅರ್ಥಬರುವಹಾಗೆ ಹೇಳುವುದಕ್ಕೆ ಪ್ರತ್ಯೇಕಿಸಿ ಅವರನ್ನು "ಪ್ರಜೆಗಳು" ಎಂದು ಹೇಳಲಾಗಿದೆ. ಈದಿನ ಭೂಮಿ ಮೇಲಿರುವ ಮನುಷ್ಯರಲ್ಲಿ ಮಾನವರು ಎಲ್ಲಿ ನೋಡಿದರೂ ಇದ್ದಾರೆ. ಆದರೇ ಪ್ರಜೆಗಳು ಅಪರೂಪವಾಗಿ ಇದ್ದಾರೆಂದು ಹೇಳಬಹುದು. ಮನುವು ಹೇಳಿದ ಮೊದಲ ಬೋಧನೆಗಿಂತ, ಎರಡನೆಯ ಬೋಧನೆಯಾದ ಆದ ಮನು ಧರ್ಮಶಾಸ್ತ್ರವೇ ಈದಿನ ಪ್ರಜೆಗಳಲ್ಲಿ ಪೂರ್ತಿಯಾಗಿ ಹರಡಿಹೋಗಿದೆ. ಮೊದಲು ಹೇಳಿದ ದೈವ ಧರ್ಮಗಳು ಈದಿನ ಮನುಷ್ಯರಲ್ಲಿ ಕಾಣಿಸುತ್ತಿಲ್ಲ. ಆದ್ದರಿಂದ ಪ್ರಜೆಗಳು ಅಪರೂಪವಾಗಿ ಕಾಣಿಸುತ್ತಿದ್ದಾರೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :– ನಿಮ್ಮಂತಹವರು ದೈವ ಧರ್ಮಗಳನ್ನು, ಮನು ಧರ್ಮಗಳನ್ನು ಬೇರ್ಪಡಿಸಿ ತೋರಿಸುವುದರಿಂದ ಮಾನವರು ಕೆಲವರಾದರೂ ಪ್ರಜೆಗಳಾಗಿ ಬದಲಾಗಬಹುದಲ್ಲವೆ!**

**ಉತ್ತರ :–** ಬೇರ್ಪಡಿಸಿ ಹೇಳಿದರೇ ವಿಷಯ ಮಾತ್ರ ಅರ್ಥವಾಗುತ್ತದೆ. ತಿಳಿಯದ ವಿಷಯ ತಿಳಿಯಬಲ್ಲದು. ಇದು ಪ್ರಪಂಚ ವಿಷಯಗಳಲ್ಲಾದರೇ ಸರಿಹೋಗುತ್ತದೆ.

ಇಲ್ಲಿ ನಾನು ಹೇಳುವುದು ದೈವ ಸಂಬಂಧವಾದ ಜ್ಞಾನವಾದ್ದರಿಂದ ಜ್ಞಾನವೆಲ್ಲವೂ ಮನುಷ್ಯನಲ್ಲಿ ಶ್ರದ್ಧ ಇರುವಾಗಲೇ ಅವನಿಗೆ ತಿಳಿಯುತ್ತದೆ. ಒಬ್ಬ ಮನುಷ್ಯ ಮಾನವನಿಂದ 'ಪ್ರಜೆ'ವರೆಗು ಬದಲಾಗಬೇಕೆಂದರೇ ಅವನಿಗೆ ದೈವಜ್ಞಾನ ಲಭಿಸಬೇಕು. ದೈವಜ್ಞಾನ ಲಭಿಸಬೇಕೆಂದರೇ ಅವನಿಗೆ ದೇವರ ಮೇಲೆ, ದೇವರ ಜ್ಞಾನದ ಮೇಲೆ ಹೆಚ್ಚಿನ ಶ್ರದ್ಧೆ ಇರಬೇಕು. ಶ್ರದ್ಧೆ ಇಲ್ಲದೇ ಹೋದರೇ ಜ್ಞಾನ ಲಭಿಸುವುದಿಲ್ಲ. ಆದ್ದರಿಂದ ಮೊದಲು ಮಾನವನಿಗೆ ದೇವರ ಜ್ಞಾನದ ಮೇಲೆ ಶ್ರದ್ಧೆ ಇರಬೇಕು. ಬೋಧಕನಾಗಲೀ, ಗುರುವಾಗಲೀ ಎಷ್ಟು ವಿವರವನ್ನು ಹೇಳಿದರೂ, ಎಷ್ಟು ಒಳ್ಳೆಯದಾಗಿ ಬೋಧಿಸಿದರೂ ಶ್ರದ್ಧೆ ಇಲ್ಲದೇ ಹೋದರೇ ಮಾನವನು ಪ್ರಜಯಾಗಿ ಬದಲಾಗುವುದಿಲ್ಲ.

**ಪ್ರಶ್ನೆ :– ಸೂರ್ಯನು ಮನುವಿಗೆ ದೈವಜ್ಞಾನವನ್ನು ಹೇಳಿದ್ದಾನೆ. ಮನುವು ಪ್ರಜೆಗಳಿಗೆ ದೈವಜ್ಞಾನವನ್ನು, ಮಾನವರಿಗೆ ತನ್ನ ಜ್ಞಾನವನ್ನು ಬೋಧಿಸಿದ್ದಾನೆ. ಆದರೇ ದೈವಜ್ಞಾನ ತಿಳಿದ ಪ್ರಜೆಗಳು ಸೂರ್ಯನನ್ನು ನಮಸ್ಕರಿಸುತ್ತಿಲ್ಲ. ಮನುವು ಜ್ಞಾನವನ್ನು ತಿಳಿದ ಮಾನವರು ಮಾತ್ರ ಸೂರ್ಯನನ್ನು ನಮಸ್ಕರಿಸುತ್ತಿದ್ದಾರೆ. ಸೂರ್ಯ ನಮಸ್ಕಾರವನ್ನು ಪ್ರಜೆಗಳು ಮಾಡುತ್ತಿಲ್ಲ ಆದರೇ, ಮಾನವರೇ ಮಾಡುತ್ತಿದ್ದಾರೆ. ಮಾನವರು ಮನುವಿನ ಜ್ಞಾನವನ್ನು ತಿಳಿಯುವುದರಿಂದ ಮನುವಿಗೆ ನಮಸ್ಕಾರ ಮಾಡಬೇಕೇ ಹೊರತು, ಸೂರ್ಯನಮಸ್ಕಾರ ಏಕೆ ಮಾಡುತ್ತಿದ್ದಾರೆ? ಸೂರ್ಯನು ದೈವಜ್ಞಾನವನ್ನು ಭೂಮಿಮೇಲೆಗೆ ತಂದಿದ್ದಾನೆಂಬ ಗೌರವದಿಂದ ಪ್ರಜೆಗಳು ಸೂರ್ಯನನ್ನು ನಮಸ್ಕರಿಸಬಹುದು. ಆದರೇ ಪ್ರಜೆಗಳು ಯಾರೂ ಸೂರ್ಯ ನಮಸ್ಕಾರವನ್ನು ಮಾಡಲಿಲ್ಲ. ಮನು ಧರ್ಮಗಳನ್ನು ತಿಳಿದ ಮಾನವರು ದೈವಜ್ಞಾನವನ್ನು ತಿಳಿಸಿದ ಸೂರ್ಯನಿಗೆ ಏಕೆ ನಮಸ್ಕರಿಸುತ್ತಿದ್ದಾರೆ? ಅವರಿಗೆ ಸಂಬಂಧವಿಲ್ಲದ ಕೆಲಸವನ್ನು ಏಕೆ ಮಾಡುತ್ತಿದ್ದಾರೆ?**

**ಉತ್ತರ :–** ಸೂರ್ಯ ನಮಸ್ಕಾರಗಳು ಮಾಡುವುದು ಮನು ಧರ್ಮವನ್ನು ಅನುಸರಿಸುವ ಮಾನವರೇ. ಪ್ರಜೆಗಳು ಯಾರೂ ಸೂರ್ಯನಮಸ್ಕಾರ ಮಾಡಲಿಲ್ಲ ಅಲ್ಲವೆ! ಪ್ರಜೆಗಳು ದೈವಜ್ಞಾನವನ್ನು ತಿಳಿದಿರುವುದರಿಂದ ಅವರು ದೈವ ಧರ್ಮಗಳ

ಪ್ರಕಾರ ದೇವರನ್ನು ಹೊರತು ಯಾರಿಗೂ ನಮಸ್ಕರಿಸುವುದಿಲ್ಲ. ಆದ್ದರಿಂದ ಪ್ರಜೆಗಳಾದವರು ಯಾರೂ ಸಹ ಸೂರ್ಯನಮಸ್ಕಾರಗಳು ಮಾಡಲಿಲ್ಲ. ಭಗವದ್ಗೀತೆ ಸೃಷ್ಠಿ ಆದಿಯಲ್ಲಿಯೇ ಸೂರ್ಯನಿಗೆ ಆಕಾಶವಾಣಿಯಿಂದ ತಿಳಿದರೂ, ಅದು ಆಗ ಗ್ರಂಥರೂಪವಾಗಲಿಲ್ಲ. ನಂತರ ದ್ವಾಪರ ಯುಗದ ಕೊನೆಯಲ್ಲಿ ಭಗವದ್ಗೀತೆ ಗ್ರಂಥರೂಪವಾಗಿದೆ. ಭಗವದ್ಗೀತಾ ಗ್ರಂಥ ಪ್ರಥಮ ದೈವ ಗ್ರಂಥವಾಗಿದೆ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 22ನೇ ಶ್ಲೋಕದಲ್ಲಿ ಈ ರೀತಿ ಹೇಳಲ್ಪಟ್ಟಿದೆ.

***ಶ್ಲೋ॥ ಅನನ್ಯಾ ಶ್ಚಿಂತಯಂತೋ ಮಾಂ ಯೇಜನಾಃ ಪರ್ಯುಪಾಸತೇ ।***
***ತೇಷಾಂ ನಿತ್ಯಾಭಿ ಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್॥***

ಭಾವಾರ್ಥ :– **"ಅನ್ಯದೇವತೆಗಳ ಚಿಂತನೆ ಇಲ್ಲದೇ ಯಾವ ಜನನಾದರೆ ನನ್ನನ್ನೇ ದೊಡ್ಡದಾಗಿ ತಿಳಿದು ನಿತ್ಯ ನನ್ನ ಧ್ಯಾಸ ಹೊಂದಿದ್ದಾನೋ, ಅವನ ಯೋಗವೊಂದರ ಕ್ಷೇಮವನ್ನು ನಾನೇ ನೋಡಿಕೊಳ್ಳುತ್ತೇನೆ"** ಎಂದು ಶರೀರದಲ್ಲಿನ ದೇವರು ಸ್ವತಃವಾಗಿ ಹೇಳಲಾಗಿದೆ. ಈಶ್ಲೋಕ ಭಾವವನ್ನನುಸರಿಸಿ ಇತರೆ ದೇವತೆಗಳ ಭಕ್ತಿಯಾಗಲೀ, ಇತರೆ ದೇವತೆಗಳಿಗೆ ನಮಸ್ಕರಿಸುವುದಾಗಲೀ ಮಾಡದವನು ನನ್ನ ಭಕ್ತನೆಂದೂ, ಆತನ ಯೋಗ ಕೆಟ್ಟುಹೋಗದಂತೆ ಭಂಗ ಉಂಟಾಗದಂತೆ ನಾನೇ ನೋಡಿಕೊಳ್ಳುತ್ತೇನೆಂದು ಸ್ವತಃವಾಗಿ ಶರೀರದಲ್ಲಿನ ದೇವರೇ ಹೇಳಿದಂತೆ ಇದೆ. ಇಲ್ಲಿ ಅನ್ಯ ದೇವತೆಗಳನ್ನು ಎಂದು ಹೇಳುವುದರಿಂದ ಸೂರ್ಯನನ್ನು ನಮಸ್ಕರಿಸುವುದು ಸಹ ಅನ್ಯದೇವತೆಯನ್ನು ನಮಸ್ಕರಿಸಿದಂತೇ ಆಗುತ್ತದೆ. ದೇವರ ಜ್ಞಾನದಲ್ಲಿ ಅನ್ಯದೇವತೆಗಳಿಗೆ ನಮಸ್ಕರಿಸುವುದು, ಪೂಜಿಸುವುದು ಇರುವುದಿಲ್ಲ. ದೇವರ ಜ್ಞಾನವಲ್ಲದಂತಹ ಮನುವುವೊಂದರ ಜ್ಞಾನದಲ್ಲಿ ಇತರರನ್ನು ಎಂದರೇ ಇತರೆ ದೇವತೆಗಳನ್ನು ಆರಾಧಿಸುವುದು ಇರುವುದರಿಂದ, ಮನು ಧರ್ಮವನ್ನು ಅನುಸರಿಸುವ ಮಾನವರು ಮಾತ್ರವೇ ಸೂರ್ಯನನ್ನು ನಮಸ್ಕರಿಸುತ್ತಿದ್ದಾರೆ. ಅಂತಹವರು ಒಬ್ಬ ಸೂರ್ಯನನ್ನೇ ಅಲ್ಲದೆ ಯಾರನ್ನಾದರೂ ಆರಾಧಿಸುತ್ತಿರುವರು. ಆದ್ದರಿಂದ ಅವರನ್ನು ಅನ್ಯದೇವತಾ ಆರಾಧಕರೆಂದು

ಹೇಳಬಹುದು. ಅನ್ಯ ದೇವತಾರಾಧನೆಯನ್ನು ದೈವಜ್ಞಾನಿಗಳಾದ ಪ್ರಜೆಗಳು ಮಾಡುವುದಿಲ್ಲ. ಪ್ರಜೆಗಳು ಅಲ್ಲದವರು, ಮಾನವರಾದವರು ಅನ್ಯ ದೇವತೆಗಳನ್ನು ಆರಾಧಿಸುತ್ತಾರೆ. ಆದ್ದರಿಂದ ಸೂರ್ಯನಮಸ್ಕಾರವೂ ಸಹ ಅನ್ಯದೇವತಾರಾಧ ನೆಯ ಕೆಳಗೇ ಜಮಮಾಡಲಾಗಿದೆ. ಆದ್ದರಿಂದ ಅವರನ್ನು ಮಾನವರೆಂದೇ ಹೇಳಬಹುದು. ಮನು ಧರ್ಮವನ್ನು ತಿಳಿದವರು ಅವರ ಜ್ಞಾನದ ಪ್ರಕಾರ ದೇವತೆಗಳನ್ನು ತಪ್ಪದೆ ಪೂಜಿಸುವರು. ಯಾರಾದರೆ ದೈವಜ್ಞಾನವನ್ನು ತಿಳಿದು ಪ್ರಜೆಗಳಾಗಿದ್ದು ಇತರ ದೇವತೆಗಳನ್ನು ಆರಾಧಿಸದೆ ದೇವರನ್ನೇ ಆರಾಧಿಸುವವ ರನ್ನು ನೋಡಿದ ಮಾನವರು ಪ್ರಜೆಗಳನ್ನು ನಾಸ್ತಿಕರಾಗಿ, ಇತರ ಮತಗಳವರಾಗಿ ಹೇಳುತ್ತಿರುವರು. ಈದಿನ ಹಿಂದೂಮತದಲ್ಲಿ ಭಗವದ್ಗೀತಾ ಜ್ಞಾನವನ್ನು ಪಕ್ಕಕ್ಕಿಟ್ಟು ಹಿಂದೂಗಳು, ಹಿಂದೂ ನಾಯಕರು, ಹಿಂದೂ ಧರ್ಮರಕ್ಷಕರೆಂದು ಹೆಸರು ಪಡೆದವರು ಪೂರ್ತಿಯಾಗಿ ಮಾನವತ್ವ ಹೊಂದಿ ಸೂರ್ಯನಮಸ್ಕಾರಗಳಿಂದ ನದಿಗಳ ಪೂಜೆಗಳವರೆಗು ಆರಾಧನೆಗಳು ಮಾಡುತ್ತಾ, ತಮ್ಮದೇ ನಿಜವಾದ ಭಕ್ತಿಯಾಗಿ, ತಾವೇ ನಿಜವಾದ ಹಿಂದೂಗಳಾಗಿ ಹೇಳಿಕೊಳ್ಳುತ್ತಾ, ಇತರ ದೇವತೆಗಳ ಪೂಜೆಗಳು ಮಾಡದವರನ್ನು, ನಾಸ್ತಿಕರಾಗಿ, ಪರಮತಸ್ಥರಾಗಿ ಹೇಳುತ್ತಿರುವರು. ನಿಜವಾದ ಪ್ರಜೆಗಳಾಗಿ ಇರುವವರು, ಏನು ಹೇಳಿದರೂ ಪ್ರಜೆಗಳು ದೈವಧರ್ಮಗಳ ಪ್ರಕಾರವೇ ನಡೆದುಕೊಳ್ಳುವರು. ಯಾರನ್ನೂ ಮುಗಿಯುವುದಿಲ್ಲ. ಇತರೆ ದೇವತೆಗಳನ್ನು ಮುಗಿಯುವವರು ಮನು ಧರ್ಮಯುತರು ಮಾನವರೆಂದು ತಿಳಿಯಬೇಕು.

ದೇವರಿಗೆ ಇಷ್ಟ ಇಲ್ಲದವರನ್ನು ಮಾಯೆ ದೇವರ ಮಾರ್ಗದ ಕಡೆಗೆ ಬಾರದಂತೆ ಮಾಡುತ್ತದೆ. ಆದರೇ ಮಾಯೆ ಏನು ಮಾಡುತ್ತಿರುವುದೆಂಬುದನ್ನು ಯಾರಿಗೂ ತಿಳಿಯದಂತೆ ಮಾಡಬಲ್ಲದು. ಆದ್ದರಿಂದ ಮನುಷ್ಯನನ್ನು ದೈವಮಾರ್ಗದಲ್ಲಿ ಇರುವಂತೆ ನಂಬಿಸಿ, ತಾನಿರುವುದು ದೈವಮಾರ್ಗವೇಯೆಂದು ನಂಬಿಸಿ ದೇವರ ಮಾರ್ಗದಿಂದ ಪಕ್ಕಕ್ಕೆ ಕಳುಹಿಸುತ್ತದೆ. ಮನುಷ್ಯನನ್ನು ತಾನು ಎಲ್ಲರಿಗಿಂತ ಒಳ್ಳೆಯ ಮಾರ್ಗದಲ್ಲಿ ಇದ್ದೇನೆಂದು ನಂಬಿಸುವುದಕ್ಕೆ ದೇವತೆಗಳ

ಮೇಲೆ ಭಕ್ತಿಯನ್ನು ಕಲ್ಪಿಸಿ, ಭಕ್ತಿ ಸಂಘಗಳಲ್ಲಿ ಮುಖ್ಯವಾದವನಾಗಿ ಇರುವಂತೆ ಮಾಡಿ, ಭಕ್ತಿ ಕಾರ್ಯಕ್ರಮಗಳನ್ನು ಕಾಳಜಿಯಿಂದ ಮಾಡಿಸುತ್ತಾ, ಭಕ್ತಿ ಸಂಘಕ್ಕೆ ಕಾರ್ಯಕರ್ತನಾಗಿಯೋ, ಇಲ್ಲವೆ ಸಂಘಕ್ಕೇ ದೊಡ್ಡವನಾಗಿಯೋ ಮಾಡಿ ಭಕ್ತಿ ಮಾರ್ಗದಲ್ಲಿ ಎಷ್ಟೋ ಶ್ರದ್ಧೆಯಿಂದ ಶ್ರಮಿಸಿ, ಕೆಲಸಮಾಡುವಂತೆ ಮಾಡಿ ನನಗಿಂತ ಭಕ್ತಿ ಇರುವವನು ಇಲ್ಲ ಎನ್ನುವಂತೆ ಮಾಡುತ್ತದೆ. ಅದರಿಂದ ನಾನು ದೈವಮಾರ್ಗದಲ್ಲಿ ಇಲ್ಲವೆಂಬ ಭಾವನೆ ಅವನಲ್ಲಿ ಬರುವುದೇ ಇಲ್ಲ. ಅಂತಹವರು ನಿಜ ದೈವಮಾರ್ಗದಲ್ಲಿ ಇರುವವರನ್ನು ನೋಡಿ ಅವರ ಮಾರ್ಗ ಸರಿಯಾದುದಲ್ಲವೆಂದು ತಿಳಿಯುತ್ತಿರುವರು. ಈದಿನ ಹಿಂದೂ ಸಮಾಜದಲ್ಲಿ ಹಿಂದೂ ಮತರಕ್ಷಣೆ ಸಂಘಗಳಲ್ಲಿ ಇರುವವರು ಬಹಳ ಮಟ್ಟಿಗೆ ಯಾವುದೋ ಒಂದು ಭಕ್ತಿ ಮಾರ್ಗದಲ್ಲಿದ್ದು, ದೇವತಾರಾಧನೆಗಳನ್ನು ಜವಾಬ್ದಾರಿಯಿಂದ ಮಾಡುತ್ತಾ ಇತರರಿಂದ ಮಾಡಿಸುತ್ತಾ ತಾವು ದೊಡ್ಡ ಜ್ಞಾನಿಗಳೆಂದೋ ದೊಡ್ಡ ಭಕ್ತರೆಂದೋ ಅಂದುಕೊಳ್ಳುತ್ತಾ ತಾವಿರುವ ಪರಿಸ್ಥಿತಿ ಒಳ್ಳೆಯದಾ! ಕೆಟ್ಟದಾ! ಎಂದು ಆಲೋಚಿಸುವ ಸ್ಥಿತಿಯಲ್ಲಿ ಇರುವುದಿಲ್ಲ. ಅವರಲ್ಲಿನ ಮಾಯೆಯೇ ಅವರನ್ನು ಆ ರೀತಿ ತಯಾರು ಮಾಡಿದೆಯೆಂದು ಹೇಳಬಹುದು.

ಹೆಂಡ ಕುಡಿದ ಕಾಳಿದಾಸು, ಮತ್ತನ್ನು ಕುಡಿದ ದೇವದಾಸು, ಭಂಗಿ ಕುಡಿದ ರಾಮದಾಸು ಒಂದುಕಡೆ ಸೇರಿ 'ಜಗವೇ ಮಾಯೆ ಬದುಕೇ ಮಾಯೆ' ಎಂದು ಮಾಯೆಯನ್ನು ಕುರಿತು ತಿಳಿದವರು ಹಾಡಿದ ಹಾಗೆ ಹಾಡುತ್ತಿರುವರು. ಮಾಯೆಯೇ ಅವರನ್ನು ಆ ಸ್ಥಿತಿಗೆ ತಂದಿದೆಯೆಂದು ಗ್ರಹಿಸಲಾರರು. ಅದೇ ರೀತಿ ದೇಹದಲ್ಲಿನ ಆತ್ಮವನ್ನು, ಪರಮಾತ್ಮನನ್ನು ತಿಳಿಯಲಾರದವರು ತಾವು ದೇಶದಲ್ಲಿನ ದೇಶಭಕ್ತಿಯನ್ನು ಹೊಂದಿದ್ದೇವೆಂದು ತಾವೇ ಮತವನ್ನು ರಕ್ಷಿಸುತ್ತಿದ್ದೇವೆಂದು, ಹಿಂದೂ ಧರ್ಮಗಳನ್ನು ಕಾಪಾಡುತ್ತಿದ್ದೇವೆಂದು ಹೇಳಿ ಕೊಳ್ಳುತ್ತಿರುವರು. ವಾಸ್ತವವಾಗಿ ಅವರನ್ನು ಮಾಯೆ ಧರ್ಮಗಳಿಗೆ ಬಹಳ ದೂರವಾಗಿ ಇಟ್ಟಿದೆಯೆಂದು ಬಹಳ ಜನರಿಗೆ ತಿಳಿದಿಲ್ಲ. ಹಿಂದೂಗಳಲ್ಲಿ ದೊಡ್ಡವನಂತೆ ಹೇಳಿಕೊಳ್ಳುತ್ತಿದ್ದರೂ, ಅನೇಕ ಭಕ್ತಿ ಕಾರ್ಯಕ್ರಮಗಳಲ್ಲಿ

ಭಾಗವಹಿಸುತ್ತಿದ್ದರೂ ಆತನಿಗೆ ಹಿಂದೂ ಧರ್ಮಗಳೆಂದರೆ ಯಾವುವೋ ವಾಸ್ತವವಾಗಿ ತಿಳಿದಿಲ್ಲ. ಅನ್ಯದೇವತಾರಾಧನೆ ಮಾಡುವುದೇ ಹಿಂದೂ ಧರ್ಮಗಳನ್ನು ಆಚರಿಸಿದಂತೆ ಎಂದುಕೊಳ್ಳುತ್ತಿರುವನು. ವಾಸ್ತವವಾಗಿ ದೈವ ಮಾರ್ಗದಿಂದ ಪಕ್ಕಕ್ಕೆ ಹೋದವರು ಮಾತ್ರವೇ ಹಾಗೆ ಮಾಡುತ್ತಿರುವರೆಂದು ಅವರಿಗೆ ತಿಳಿದಿಲ್ಲ. ಇತರರು ಹೇಳಿದರೂ ಅವರು ಗ್ರಹಿಸಿಕೊಳ್ಳುವ ಸ್ಥಿತಿಯಲ್ಲಿ ಇರುವುದಿಲ್ಲ. ಮಾಯೆ ಅಷ್ಟು ಭದ್ರವಾಗಿ ತಯಾರುಮಾಡಿದೆ.

ಸೂರ್ಯನು ಭೂಮಿಯಮೇಲೆ ಜ್ಞಾನ ಹೇಳಿದ್ದಾನೆಂದು ಆದಿನ ತಿಳಿಯದಿದ್ದರೂ 5000 ವರ್ಷಗಳ ಪೂರ್ವದಲ್ಲಿ ತಿಳಿದುಹೋಗಿದೆ. ಸೂರ್ಯನು ಭೂಮಿಯ ಮೇಲೆ ಜ್ಞಾನವನ್ನು ತಂದಿರುವ ಮೊದಲ ಗುರುವೆಂದು ಎಲ್ಲರಿಗೂ ತಿಳಿದಿದೆ. ಆದ್ದರಿಂದ ಆತನನ್ನೇ ಮೊದಲ ಗುರುವೆಂದು ತಿಳಿಯುವಂತೆ ಸೂರ್ಯನಿಗೆ **"ಆದಿತ್ಯ"** ಎಂದು ಹೆಸರು ಇಡುವುದು ಸಹ ನಡೆದಿದೆ. ಮನುಷ್ಯನ ಮೊದಲ ಗುರುವಾದ ಸೂರ್ಯನನ್ನು ನಮಸ್ಕರಿಸುವುದು ಹಿಂದೂಗಳ ಸಾಂಪ್ರದಾಯಗಳಲ್ಲಿ ಮೊದಲ ಸಾಂಪ್ರದಾಯವಾಗಿ ಕೆಲವರು ಹೇಳುತ್ತಿರುವುದು ತಿಳಿದ ವಿಷಯವೇ. ಬೆಳಗ್ಗೆ ಪ್ರಾರಂಭದಲ್ಲೇ ಸೂರ್ಯನಮಸ್ಕಾರದಿಂದ ಹಿಂದೂ ಗಳು ಕೆಲಸಗಳು ಪ್ರಾರಂಭಿಸಬೇಕೆಂದು ಕೆಲವರು ಸ್ವಾಮೀಜಿಯರು, ಹಿಂದೂ ಮತ ಹಿರಿಯರು ಹೇಳಿದಾಗ ಕೇಳಿದ್ದೇವೆ. ಸೂರ್ಯನು ಮೊದಲು ಜ್ಞಾನವನ್ನು ಹೇಳಿದವನಾದ್ದರಿಂದ ಆತನನ್ನು ನಮಸ್ಕರಿಸುವುದರಲ್ಲಿ ತಪ್ಪಿಲ್ಲವೆಂದು ಎಲ್ಲರೂ ಅಂದುಕೊಳ್ಳುವರು. ಸೂರ್ಯ ನಮಸ್ಕಾರಗಳನ್ನು ಮಾಡಲು ದೊಡ್ಡದೊಡ್ಡ ಸ್ವಾಮೀಜಿಯರು ಹೇಳುವುದೇ ಅಲ್ಲದೆ, ಅವರು ಮಾಡಿ ತೋರಿಸುತ್ತಿದ್ದಾರೆ. ಅವರನ್ನು ನೋಡಿ ಒಳ್ಳೆಯ ಕೆಲಸವೇ ಅಲ್ಲವೇ! ಎಂದು ಇತರರು ಮಾಡುತ್ತಿದ್ದಾರೆ. ಈ ಮಧ್ಯ ಕಾಲದಲ್ಲಿ ಸೂರ್ಯನಮಸ್ಕಾರಗಳು ಅಪರೂಪವಾಗಿ ಎಲ್ಲೋ ಒಂದುಕಡೆ ಕಾಣಿಸುತ್ತಿರುವವು. ಪೂರ್ವದಲ್ಲಿ ಪ್ರತಿ ಮನುಷ್ಯ ಬೆಳಗ್ಗೆ ಸೂರ್ಯ ನಮಸ್ಕಾರ ಮಾಡುತ್ತಿದ್ದನು. ಭಗವದ್ಗೀತಾ ಜ್ಞಾನದ ಪ್ರಕಾರ, ದೈವ ಧರ್ಮಗಳಿಗೆ ಸೂರ್ಯನಮಸ್ಕಾರ ಮಾಡುವುದು ವಿರುದ್ಧವೆಂದು ಬಹಳಜನರಿಗೆ ತಿಳಿದಿಲ್ಲ.

**"ಅನ್ಯಚಿಂತೆ ಇಲ್ಲದೆ"** ಎಂದು ಭಗವದ್ಗೀತೆಯಲ್ಲಿ ಹೇಳಿದಾಗ, ಸೂರ್ಯನ ಮೇಲೆ ಭಕ್ತಿಯನ್ನು ತೋರಿಸುವುದು ದೇವರಿಗಿಂತ ಅನ್ಯವಾದ ಸೂರ್ಯನನ್ನು ಆರಾಧಿಸುವುದು ಅಧರ್ಮವೇ ಆಗುತ್ತದೆ. ಆದರೂ ಆ ವಿಷಯವನ್ನು ಮಾಯೆ ಮನುಷ್ಯರಿಗೆ ತಿಳಿಯದಂತೆ ಮಾಡಿದೆ.

ಮಾಯ ಏನು ಮಾಡಿದರೂ ಬಹಳ ಜೋರಾಗಿ ಮಾಡುತ್ತದೆ. ಮಾಯೆ ಮಾಡಿದ ಕೆಲಸವನ್ನು ಯಾವ ಮನುಷ್ಯ ಗುರುತಿಸಲಾರನು. ಆದ್ದರಿಂದ ಮಾಯೆ ಪ್ರಭಾವದಲ್ಲಿ ಮುಳುಗಿದವನು ಯಾರೇಯಾಗಲಿ ತಾನು ಮಾಡುತ್ತಿರುವುದೇ ಸರಿ ಎಂದು ತಿಳಿಯುತ್ತಿರುವನು. ಮಾಯೆ ಮುಂಜಾನೆಯೇ ಸೂರ್ಯ ನಮಸ್ಕಾರಗಳಲ್ಲಿ ಮನುಷ್ಯರನ್ನು ಸಿಲುಕಿಸಿ ಮನುಷ್ಯರನ್ನು ಮಾನವರನ್ನಾಗಿ ತಯಾರುಮಾಡಿದೆ. ಕೆಲವರು ಸೂರ್ಯನಮಸ್ಕಾರಗಳನ್ನು ಮಾತ್ರ ಮಾಡಿ ಇತರೆ ದೇವತೆಗಳನ್ನು ಯಾರನ್ನೂ ನಮಸ್ಕರಿಸದೇ, ಆರಾಧಿಸದೆ ಇರುತ್ತಾರೆ. ಅಂತಃವರು ನಮಗೆ ಜ್ಞಾನವನ್ನು ಹೇಳಿದ ಗುರುವಿಗೆ ನಮಸ್ಕಾರ ಮಾಡುತ್ತಿದ್ದೇನೆ ಹೊರತು ಇತರೆ ದೇವತೆಗಳಿಗೆ ನಾವು ಮುಗಿಯುತ್ತಿಲ್ಲ ಅಲ್ಲವೆ! ಎಂದು ಅನ್ನುತ್ತಿರುವರು. ಆದರೇ ಸೂರ್ಯನು ಗುರುವು ಅಲ್ಲವೆಂದು, ಸೂರ್ಯನು ಕೇವಲ ಮೊದಲ ಬೋಧಕನೇ ಎಂದು ಅವರಿಗೆ ತಿಳಿದಿಲ್ಲ. ತಾನು ತಿಳಿದುಕೊಂಡಿ ರುವುದನ್ನು ಇತರರಿಗೆ ಹೇಳುವವರು ಬೋಧಕರೇ ಆಗುತ್ತಾರೆ. ಇತರರು ಯಾರೂ ಹೇಳದ ಜ್ಞಾನವನ್ನು ಮೊದಲು ಬೋಧಿಸಿದವನು ಗುರುವಾಗುವನೆಂದು ಬಹಳ ಜನರಿಗೆ ತಿಳಿದಿಲ್ಲ. ಗುರುವಿಗೂ, ಬೋಧಕನಿಗೂ ವ್ಯತ್ಯಾಸ ತಿಳಿಯದವರಿರು ವುದರಿಂದ ಸೂರ್ಯನನ್ನು ಗುರುವೆಂದು ಹೇಳುತ್ತಿದ್ದಾರೆ. ವಾಸ್ತವವಾಗಿ ಸೂರ್ಯನು ಗುರುವಲ್ಲ, ಕೇವಲ ಬೋಧಕನು ಮಾತ್ರವೇಯೆಂದು ತಿಳಿಯಬೇಕು. ಆದರೇ ಮಾಯೆ ಸೂರ್ಯನನ್ನು ಗುರುವಾಗಿ ತೋರಿಸಿ, ಸೂರ್ಯನಮಸ್ಕಾರ ಮಾಡಿಸಿ ಮನುಷ್ಯನನ್ನು ಪಕ್ಕದಾರಿ ಹಿಡಿಸಿ ಕೊನೆಗೆ ಮನುಷ್ಯನನ್ನು ಮಾನವನ ನ್ನಾಗಿ ಬದಲಾಯಿಸುತ್ತಿದೆ. ಮಾನವನೆಂದು ಹೇಳಿಕೊಳ್ಳುವ ಮನುಷ್ಯ ಮಾಯೆ ಪ್ರಭಾವದಿಂದ ತಾನು ಮಾಡುತ್ತಿರುವುದೇ ದೈವ ಆರಾಧನೆಯೆಂದು, ತಾನು

ಮಾತನಾಡುತ್ತಿರುವುದೇ ದೈವಜ್ಞಾನವೆಂದು ಅಂದುಕೊಳ್ಳುತ್ತಿರುವನು. ಇತರರು ದೈವಜ್ಞಾನವನ್ನು ಹೇಳಿದರೂ ಅವರಿಗೆ ಅದು ಪರಮತಗಳ ಬೋಧನೆ ಯಾಗಿ ಕಾಣಿಸುತ್ತದೆ. ಹಾಗಿರುವಾಗ ಅಸಲಾದ ಜ್ಞಾನಿಯನ್ನೇ ಪರಮತ ಬೋಧ ಹೇಳುತ್ತಿದ್ದಾನೆಂದು ಆರೋಪಣೆ ಮಾಡಿ, ಅವರನ್ನು ಹಿಂಸಿಸುವುದಕ್ಕೆ ಶುರು ಮಾಡುವರು.

**ಪ್ರಶ್ನೆ :– ಹಿಂದೂ ಸಂಸ್ಕೃತಿಯಲ್ಲಿ ಸೂರ್ಯ ನಮಸ್ಕಾರ ಮುಖ್ಯವಾದ ಸಾಂಪ್ರದಾಯವೆಂದು ಎಲ್ಲರೂ ಅನ್ನುತ್ತಿದ್ದಾರಲ್ಲವೆ! ಸೂರ್ಯನಮಸ್ಕಾರಗಳಿಂದಲೇ ಹಿಂದೂಗಳ ಔನ್ನತ್ಯ ಇತರ ಮತಗಳವರಿಗೂ ತಿಳಿಯುತ್ತದೆಂದು ಹಿಂದೂಗಳು ಎಲ್ಲರೂ ಅನ್ನುತ್ತಿದ್ದಾರಲ್ಲವೆ!**

**ಉತ್ತರ :–** ಮಾಯೆ 'ಮತ' ಎಂಬ ಬಲೆಯನ್ನು ಹಾಕಿ ಒಬ್ಬ ಹಿಂದೂಗಳನ್ನೇ ಅಲ್ಲದೆ ಎಲ್ಲ ಮತಗಳವರನ್ನು ದೇವರ ಮಾರ್ಗದಿಂದ ದೂರ ಮಾಡಿದೆ. ಹಿಂದೂಗಳನ್ನು 'ಸಂಸ್ಕೃತಿ, ಸಾಂಪ್ರದಾಯ'ಗಳೆಂಬ ಹೆಸರಿಂದ ದೇವರು ಹೇಳಿದ ಭಗವದ್ಗೀತಾ ಜ್ಞಾನಕ್ಕೆ ಮಾಯೆ ದೂರ ಮಾಡಿದೆ. ಮನುಷ್ಯರನ್ನು ಮಾನವರನ್ನಾಗಿ ಮಾಡಿ ದೇವರ ಜ್ಞಾನಕ್ಕೆ ದೂರ ಮಾಡುವುದು ಮಾಯೆವೊಂದರ ಕೆಲಸವಾದರೂ, ಅದೆಲ್ಲವೂ ದೇವರ ಆದೇಶದಿಂದಲೇ ಮಾಯೆ ಹಾಗೆ ಮಾಡಿದೆಯೆಂದು ತಿಳಿಯಬೇಕು. ಸಾರಾಯಿ ಕುಡಿದವನನ್ನು ಗುಡಿಯೊಳಗೆ ಬಾರದಂತೆ ಪೂಜಾರಿ ತಡೆದಂತೆ ಶ್ರದ್ಧೆ ಇಲ್ಲದವನನ್ನು ದೇವರ ಹತ್ತಿರಕ್ಕೆ ಬಾರದಂತೆ ಮಾಯೆ ತಡೆಯುತ್ತದೆ. ಹಿಂದೂಗಳ ದೊಡ್ಡತನ ಸೂರ್ಯನಮಸ್ಕಾರಗಳಿಂದ ಇತರ ಮತದವರಿಗೆ ತಿಳಿಯುತ್ತದೆಂದು ಮನುಷ್ಯರನ್ನು ಅಂದುಕೊಳ್ಳುವಂತೆ ಮಾಡಿ, ಮನುಷ್ಯನನ್ನು ಮಾಯೆ ಮಾನವನನ್ನಾಗಿ ತಯಾರುಮಾಡಿ, ಮನುಧರ್ಮಗಳನ್ನು ಆಚರಿಸುವಂತೆ ಮಾಡುತ್ತಿದೆ. ಮನುಷ್ಯ ನಾನು ಧರ್ಮಗಳನ್ನು ಆಚರಿಸುತ್ತಿದ್ದೇ ನೆಂದು ಅಂದುಕೊಳ್ಳುತ್ತಿದ್ದಾನೆ. ಆದರೇ ಯಾವ ಧರ್ಮಗಳನ್ನು ಆಚರಿ ಸುತ್ತಿದ್ದೇನೆಂದು ಪ್ರಶ್ನಿಸಿಕೊಳ್ಳಲಿಲ್ಲ. ಮನುಷ್ಯ ದೇವರ ಧರ್ಮಗಳನ್ನು ಆಚರಿಸಿದರೇ ಪ್ರಜೆಗಳಲ್ಲಿ ಸೇರಿಹೋಗುತ್ತಾನೆ, ಮನುಷ್ಯ ಮನು ಧರ್ಮಗಳನ್ನು ಆಚರಿಸಿದರೇ

ಮನುಷ್ಯರಲ್ಲಿ ಸೇರಿಹೋಗುತ್ತಾನೆ. ಆದ್ದರಿಂದ ನೀನು ಸಂಸ್ಕೃತಿ ಎಂಬ ಹೆಸರಿನಿಂದ ಮಾಯೆಯಲ್ಲಿ ಸಿಲುಕಿಕೊಳ್ಳಬೇಡ. ಮತ ಎಂಬ ಹೆಸರಿನಿಂದ ದೇವರ ದಾರಿಯನ್ನು ಬಿಟ್ಟು ನಡೆಯಬೇಡ. ನೀನು ಮರಣಿಸಿದ ನಂತರ ನಿನ್ನ ಹಿಂದೆ ನಿನ್ನ ಮತ ಇರುವುದಿಲ್ಲ, ನಿನ್ನ ಸಂಸ್ಕೃತಿ ಇರುವುದಿಲ್ಲ. ನಿನ್ನ ಹಿಂದೆ ಒಂದು ದೇವರ ಜ್ಞಾನ ಮಾತ್ರ ಬರಬಲ್ಲದು. ಉಳಿದಿರುವವನ್ನೆಲ್ಲಾ ಬಿಟ್ಟುಹೋಗಬೇಕಾಗಿದೆ. ಮಧ್ಯದಲ್ಲಿ ಬಿಟ್ಟುಹೋಗುವವುಗಳೊಂದಿಗೆ ನಿನಗೆ ಕೆಲಸವಿಲ್ಲ. ನಿನ್ನ ಹಿಂದೆ ಬರುವುದನ್ನೇ ನೋಡಿಕೋ!

**ಪ್ರಶ್ನೆ :– ಸೂರ್ಯನಿಗೆ ಆದಿತ್ಯನೆಂದು ಮನುವೇ ಹೆಸರು ಇಟ್ಟಿದ್ದಾನಲ್ಲವೆ! ಆದಿತ್ಯ ಎಂಬ ಹೆಸರನ್ನೇ ಮನುವು ಏಕೆ ಆಯ್ಕೆ ಮಾಡಿಕೊಂಡಿದ್ದಾನೆ.**

**ಉತ್ತರ :–** 'ಆದಿತ್ಯ' ಎಂಬ ಹೆಸರನ್ನು ಸೂರ್ಯನಿಗೆ ಮನುವು ಇಟ್ಟಿರುವುದು ವಾಸ್ತವವೇ ಆದರೂ, ಮನುವು ತಿಳಿದು ಸೂರ್ಯನಿಗೆ ಆ ಹೆಸರನ್ನು ಇಡಲಿಲ್ಲ. ತನಗೆ ಜ್ಞಾನ ಹೇಳಿದ ವ್ಯಕ್ತಿಗೆ ಆದಿತ್ಯ ಎಂಬ ಹೆಸರನ್ನು ಇಡಬೇಕೆಂದುಕೊಂಡು ಇಟ್ಟಿದ್ದಾನೆ ಆದರೆ, ತನಗೆ ಸೂರ್ಯನು ಜ್ಞಾನ ಹೇಳಿದ್ದಾನೆಂದಾಗಲೀ, ಸೂರ್ಯನಿಗೇ ಆದಿತ್ಯ ಎಂಬ ಹೆಸರು ಇಡುತ್ತಿದ್ದೇನೆಂದಾಗಲೀ ಮನುವಿಗೆ ತಿಳಿದಿಲ್ಲ. ಮನುವಿಗೆ ತಿಳಿದು ಇಟ್ಟರೂ, ತಿಳಿಯದೇ ಇಟ್ಟರೂ ಹೆಸರು ಇಟ್ಟಿರುವುದು ಮಾತ್ರ ಸೂರ್ಯನಿಗೇ ಎಂದು ಕೃಷ್ಣನು ಅರ್ಜುನನಿಗೆ ಜ್ಞಾನ ಹೇಳಿದಾಗ ತಿಳಿದಿದೆ. ಆದರೇ ಆ ದಿನ ಮನುವು ಆದಿತ್ಯ ಎಂಬ ಹೆಸರನ್ನು ಆಯ್ಕೆ ಮಾಡಿಕೊಳ್ಳುವುದಕ್ಕೆ ಕಾರಣವಿದೆಯೆಂದು ಹೇಳುತ್ತಿದ್ದೇವೆ. ಆದಿತ್ಯ ಎಂಬ ಹೆಸರಲ್ಲಿ ಮೇಲ್ನೋಟಕ್ಕೆ ಕಾಣಿಸುವ ಅರ್ಥದ ಪ್ರಕಾರ ಮೊದಲ ಗುರುವೆಂದು ಹೇಳಬಹುದು. ಆದರೇ ಅದೇ ಅರ್ಥವನ್ನೇ ವಿವರವಾಗಿ ಹೇಳಿಕೊಂಡರೇ ಹೀಗೆ ಇದೆ.

ಆದಿತ್ಯ ಎಂಬ ಪದವನ್ನು ಎರಡಾಗಿ ಬೇರ್ಪಡಿಸಿ ನೋಡಿದರೇ ಆ+ದಿತ್ಯ=ಆದಿತ್ಯ ಎಂದು ಇದೆ. ಮೊದಲು 'ದಿತ್ಯ' ಎಂಬ ಪದವನ್ನು ಕುರಿತು

ನೋಡಿದರೆ ತೆಲುಗು ಭಾಷೆ ಅರ್ಥದ ಪ್ರಕಾರ **ದ, ದಿ, ದ್ವ ,ದೌ, ದೋ, ದ್ವಾ** ಎಂಬ ಮುಂತಾದ ಅಕ್ಷರಗಳೆಲ್ಲವೂ ಎರಡು ಸಂಖ್ಯೆಯನ್ನು ಸೂಚಿಸುತ್ತಿವೆ.

| | | | |
|---|---|---|---|
| 1) | **ದೋಬೂಚಿಗಳಾಟ** | : | **ಎರಡು ಬೂಚಿಗಳ ಆಟ.** |
| **2)** | **ದ್ವಂದಗಳು** | : | **ಎರಡಾಗಿ ಇವೆ.** |
| **3)** | **ದಿತ್ವ** | : | **ಎರಡು.** |
| **4)** | **ದೌ ಭೂತಗಳು** | : | **ಎರಡು ಜೀವಿಗಳು.** |
| **5)** | **ದ್ವಿತೀಯ ಭಾಗ** | : | **ಎರಡನೆಯ ಭಾಗ.** |
| **6)** | **ದಿತ್ಯ** | : | **ಎರಡಾಗಿ ಇದೆ.** |
| **7)** | **ದಂಡಿಗಾ** | : | **ಎರಡಕ್ಕಿಂತ ಹೆಚ್ಚು.** |

ಈ ರೀತಿ ದ, ದಿ, ದ್ವ, ದೌ, ದೋ, ದ್ವಿ ಎಂಬ ಅಕ್ಷರಗಳು ಎರಡು ಸಂಖ್ಯೆಯನ್ನು ತಿಳಿಸುತ್ತಿವೆ. ಇಲ್ಲಿ 'ದಿತ್ಯ' ಎಂದರೇ 'ಎರಡು' ಎಂಬ ಅರ್ಥವೇ ಬರುತ್ತಿದೆ. ಮೊದಲ ಅಕ್ಷರ 'ಆ' ಇರುವುದರಿಂದ ಇಲ್ಲ, ಅಲ್ಲ ಎಂಬ ಸೂಚನೆಯನ್ನು ತಿಳಿಸುತ್ತಿದೆ. ಅದರ ಪ್ರಕಾರ ಆದಿತ್ಯ ಎಂಬ ಪದಕ್ಕೆ ಅರ್ಥ ಎರಡು ಅಲ್ಲದಿರುವುದೆಂದು ತಿಳಿಯುತ್ತಿದೆ. ಇಲ್ಲಿ ಸಂದರ್ಭಾನುಸಾರ ನೋಡಿದರೇ ಎರಡನೆಯವನು ಇಲ್ಲ ಎಂದು ತಿಳಿಯುತ್ತಿದೆ. ಜ್ಞಾನವನ್ನು ಬೋಧಿಸಿದವರಲ್ಲಿ ನಿನ್ನನ್ನು ಮೀರಿದ ಎರಡನೆಯವನು ಇಲ್ಲ ಎಂಬ ಅರ್ಥದಿಂದ ಮನುವು ತನಗೆ ಜ್ಞಾನ ಹೇಳಿದ ವ್ಯಕ್ತಿಗೆ ಆದಿತ್ಯ ಎಂದು ಹೆಸರು ಇಡುವುದು ನಡೆದಿದೆ. ಮನುವಿಗೆ ತಿಳಿದಂತೆ ಅಷ್ಟು ದೊಡ್ಡ ಜ್ಞಾನ ಎಂದಿಗೂ ಯಾರಿಂದಲೂ ಮನುವು ಕೇಳಲಿಲ್ಲ. ಆದ್ದರಿಂದ ಅಲ್ಲಿಯವರೆಗು ಜ್ಞಾನ ಹೇಳಿದವರಲ್ಲಿ ಎರಡನೆಯವನು ಇಲ್ಲ ಎನ್ನುವಂತೆ ತನಗೆ ಜ್ಞಾನ ಹೇಳಿದ ವ್ಯಕ್ತಿಗೆ ಮನುವು **"ಆದಿತ್ಯ"** ಎಂಬ ಹೆಸರನ್ನು ಇಡುವುದು ನಡೆದಿದೆ. ಆದರೇ ಆ ಹೆಸರು ಸೂರ್ಯನಿಗೆ ನಾಮಕರಣ ಮಾಡುತ್ತಿದ್ದಂತೆ ಆಗ ಮನುವಿಗೂ ತಿಳಿದಿಲ್ಲ. ಆದಿತ್ಯನು ಯಾರಾಗಿರುವುದು ದ್ವಾಪರ ಯುಗದ ಕೊನೆಯವರೆಗು ಯಾರಿಗೂ ತಿಳಿಯದೆಂದೇ ಹೇಳಬಹುದು.

ಭಗವದ್ಗೀತೆಯನ್ನು ಕೃಷ್ಣನು ಹೇಳಿದಾಗ ಮನುವು ಆದಿತ್ಯನೆಂದು, ಹೆಸರು ಇಟ್ಟಿರುವುದು ಸೂರ್ಯನಿಗೆಂದು ತಿಳಿದಿದೆ. ಅಂದಿನಿಂದ ಎಲ್ಲರೂ ಸೂರ್ಯನನ್ನು ಆದಿತ್ಯನೆಂದು ಹೇಳುವುದು ನಡೆದಿದೆ. ಸೂರ್ಯ ಸ್ಥುತಿಯಲ್ಲಿ 'ಆದಿತ್ಯಾಯನಮಃ' ಎಂದು ಅನ್ನುವುದು ನಡೆದಿದೆ.

**ಪ್ರಶ್ನೆ :- ಇದಕ್ಕೂ ಮೊದಲು ನೀವು ಆದಿತ್ಯ ಎಂದರೆ ಮೊದಲ ಗುರುವೆಂದು ಅರ್ಥವನ್ನು ಹೇಳಿದ್ದೀರ. ಈಗೇನೋ ಆತನು ಜ್ಞಾನ ಹೇಳಿದವರಲ್ಲಿ ದೊಡ್ಡವನು. ಆತನನ್ನು ಮೀರಿದ ಎರಡನೆಯವನು ಇಲ್ಲವೆಂದು ಅರ್ಥವನ್ನು ಹೇಳಿದ್ದೀರ. ಯಾವ ಕಡೆಯೂ ಇಲ್ಲದೆ ಮಧ್ಯದಲ್ಲಿ ನಿಲ್ಲಿಸಿದ್ದೀರ. ಸೂರ್ಯನು ಎಲ್ಲ ವಿಧಗಳಲ್ಲಿ ಭೂಮಿ ಮೇಲೆ ಜ್ಞಾನವನ್ನು ಹೇಳಿದ ಮೊದಲ ಗುರುವೇ ಅಲ್ಲವೆ!**

**ಉತ್ತರ :-** ಇಲ್ಲಿ ಸ್ವಲ್ಪ ಆಲೋಚಿಸಿ ನೋಡಬೇಕಾಗಿದೆ. ಏಕೆಂದರೇ! ಇದು ಆಧ್ಯಾತ್ಮಿಕ ವಿಷಯವಾದ್ದರಿಂದ ಪ್ರತಿಯೊಂದನ್ನು ಜಾಗರೂಕತೆಯಿಂದ ನೋಡಬೇಕಾದ ಅವಶ್ಯವಿದೆ. ಎಲ್ಲರಿಗೂ ಸುಲಭವಾಗಿ ಅರ್ಥವಾಗುವುದಕ್ಕೆ ನನ್ನ ಕಣ್ಣ ಮುಂದೆಯೇ ನಡೆದ ನಾನು ನೋಡಿದ ಒಂದು ಸಂಘಟನೆಯನ್ನು ಉದಾಹರಿಸಿ ಹೇಳುತ್ತೇನೆ ನೋಡಿರಿ. ಆಗ ನನ್ನ ವಯಸ್ಸು ಬಹುಶಃ ಎಂಟು ಅಥವಾ ಒಂಬತ್ತು ವರ್ಷಗಳಿರಬಹುದು. ನಾನಿರುವ ಮನೆಯಪಕ್ಕದಲ್ಲಿ ಚಿಕ್ಕ ಹೋಟಲ್ ಇತ್ತು. ಮನೆಯ ಮತ್ತೊಂದು ಪಕ್ಕದಲ್ಲಿ ಒಬ್ಬ ಮುದುಕಿ ಇದ್ದಳು. ಆಕೆಯ ಮನೆಯಲ್ಲಿರುವ ಆಕೆಯ ಮೊಮ್ಮಗನಿಗೆ ಎರಡು ಬೊಟ್ಟುಗಳು ಕೊಟ್ಟು (ಅಂದಿನ ಕಾಲದ ನಾಣ್ಯಗಳು) ಊಟ ತರಲು ಹೇಳಿದಳು. ಆಕೆಯ ಮೊಮ್ಮಗನ ವಯಸ್ಸು ಬಹುಶಃ ಏಳು ವರ್ಷಗಳು. ಆದರೂ ಆತನಿಗೆ ಮಾತುಗಳು ಸ್ಪಷ್ಟವಾಗಿ ಮಾತನಾಡಲು ಬರುತ್ತಿರಲಿಲ್ಲ. ನಾನು ನೋಡುತ್ತಿದ್ದಂತೆ ಪಕ್ಕದಲ್ಲೇ ಇರುವ ಹೋಟಲ್‌ಗೆ ಬಂದು ಎರಡು ಬೊಟ್ಟುಗಳನ್ನು ಕೊಟ್ಟು ಊಟ ಕೊಡು ಎಂದಿದ್ದಾನೆ. ವಿಷಯ ಅಷ್ಟೇ ಆದರೆ ಆತನು ಹೇಳುವುದರಲ್ಲಿ ಸ್ವಲ್ಪ ವ್ಯತ್ಯಾಸ ಆಗಿದೆ. ಊಟ ಎಂದು ಹೇಳುವುದರಲ್ಲಿ ಗೂಟ ಎಂದು ಹೇಳಿದ್ದಾನೆ. ಹೋಟಲ್ ಆತನು ಅರ್ಥ ಮಾಡಿಕೊಂಡು ಊಟವನ್ನು ಕೊಟ್ಟು ಕಳುಹಿಸಿದ್ದಾನೆ. ಆಗ ಆ

ಹುಡುಗ ತಾನು ಹೇಳಿರುವುದೇ ಸರಿಯಾದ ಮಾತು ಎಂದುಕೊಂಡಿದ್ದಾನೆ ಹೊರತು ತಾನು ಹೇಳುವ ಪದದಲ್ಲಿ ತಪ್ಪು ಪದಗಳಿವೆಯೆಂದು ಆತನಿಗೆ ತಿಳಿದಿಲ್ಲ.

ಆ ಹುಡುಗನ ಭಾವದಲ್ಲಿ ಊಟವೇ ಇದೆ. ಆದರೂ ಹೇಳುವುದರಲ್ಲಿ ಶಬ್ದ ಬೇರೆಯಾದಂತೆ, ಆ ಬಾಲಕನಿಗೆ ತಿಳಿದಿಲ್ಲ. ಅಷ್ಟು ಮಾತ್ರಕ್ಕೆ ತಿಳಿದವರು, ಮಾತುಗಳನ್ನು ಸ್ಪಷ್ಟವಾಗಿ ಮಾತನಾಡುವವರು ಬಾಲಕನು ಹೇಳಿದಂತೇ ಹೇಳುವುದಿಲ್ಲ ಅಲ್ಲವೆ! ಅದೇ ರೀತಿ ಆಗ ಮನುವಿಗೆ ತಿಳಿದ ಭಾವವೇ ಸರಿಯಾಗಿರುವುದೆಂದು ಆತನು ಅಂದುಕೊಂಡು ಮೊದಲ ಗುರುವು ಎಂಬ ಭಾವದಿಂದ ತನಗೆ ಜ್ಞಾನ ಹೇಳಿದ ವ್ಯಕ್ತಿಯನ್ನು "ಆದಿತ್ಯ" ಎಂದು ಹೇಳಿದ್ದಾನೆ. ಒಂದು ರೀತಿಯಲ್ಲಿ ಆದಿತ್ಯ ಎಂಬ ಪದ ಮೊದಲ ಗುರುವಿಗೆ ಹೇಳುವ ಅರ್ಥದೊಂದಿಗೆ ಸರಿಹೋಗುತ್ತದೆ. ನಮಗೆ ಪೂರ್ತಿ ಜ್ಞಾನ ತಿಳಿಯದಿರುವಾಗ ಹಾಗೆ ಅಂದುಕೊಳ್ಳುತ್ತಿದ್ದೆವು. ಆದರೇ ಜ್ಞಾನ ತಿಳಿಯುವುದರಿಂದ, ತಿಳಿದ ಜ್ಞಾನದ ಪ್ರಕಾರ ಸೂರ್ಯನು ತಾನು ಕೇಳಿರುವುದನ್ನು ಪುನಃ ಹೇಳಿದ್ದಾನಾದ್ದರಿಂದ ಸೂರ್ಯನನ್ನು ಬೋಧಕನೆಂದೇ ಹೇಳಬೇಕು, ಗುರುವೆಂದು ಹೇಳಬಾರದು. **ತಾನು ಕೇಳದ ಜ್ಞಾನವನ್ನು ಸ್ವತಃವಾಗಿ ಯಾರು ಹೇಳುತ್ತಾರೋ, ಎಲ್ಲಿಯೂ ಯಾರೂ ಹೇಳದ ಜ್ಞಾನವನ್ನು ಯಾರು ಹೇಳುತ್ತಾರೋ, ಆತನನ್ನೇ ಗುರುವೆಂದು ಹೇಳಬೇಕು**. ಆದರೇ ಸೂರ್ಯನು ಆಕಾಶವಾಣಿ ಹೇಳಿದ ಜ್ಞಾನವನ್ನು ಹೇಳಿದ್ದಾನೆ, ಆದ್ದರಿಂದ ಅತನು ಬೋಧಕನೇ ಆಗುತ್ತಾನೆ ಆದರೆ, ಗುರುವು ಆಗುವುದಿಲ್ಲ. ಈ ವಿವರವೆಲ್ಲಾ ಮನುವಿಗೆ ತಿಳಿದಿಲ್ಲ ಆದ್ದರಿಂದ ಆತನ ಭಾವದಲ್ಲಿ ಸೂರ್ಯನು ಮೊದಲ ಗುರುವೆಂದೇ ಹೇಳಿದ್ದಾನೆ. ಆತನ ವರೆಗು ಆ ಭಾವ ಸರಿಯಾದುದೇ. ಆದ್ದರಿಂದ ನಾವೂ ಸಹ ಅದೇ ಅರ್ಥವನ್ನೇ ಹೇಳಿದ್ದೇವೆ. ಆದರೇ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ 'ಗುರುವು ಗುರುವೇ, ಬೋಧಕನು ಬೋಧಕನೇ'. ಆದ್ದರಿಂದ ಗುರುವನ್ನು ಬೋಧಕನೆಂದು ಅನ್ನಬಾರದು. ಬೋಧಕನನ್ನು ಗುರುವು ಎಂದು ಅನ್ನಬಾರದು. ಅಂದರೇ ಏನೂ ಆಗುವುದಿಲ್ಲ, ಶಾಸ್ತ್ರ ವಿರುದ್ಧವಾಗುತ್ತದೆ.

ಊಟವನ್ನು ನಮ್ಮ ಪಕ್ಕದ ಮನೆ ಹುಡುಗ ತನಗೆ ಬಂದಿರುವ ರೀತಿಯಲ್ಲಿ ಮಾತನಾಡಿದ್ದಾನೆ. ಆತನ ಭಾವದಲ್ಲಿ ಆತನಿಗೆ ಬೇಕಾಗಿರುವುದು ಊಟ. ಆದರೇ ತಾನು ಹೇಳುತ್ತಿರುವುದು ತಪ್ಪು ಎಂದು ತಿಳಿಯದ ಸ್ಥಿತಿಯಲ್ಲಿ ಹೇಳಿದ್ದಾನೆ. ಹಾಗೆಂದು ಆ ಹುಡುಗ ಹೇಳಿದಂತೇ ನಾವೂ ಹೇಳುವುದಿಲ್ಲ ಅಲ್ಲವೆ! ಅದೇ ವಿಧವಾಗಿಯೇ ಮನುವು ತನಗೆ ಜ್ಞಾನ ಹೇಳಿದ ವ್ಯಕ್ತಿಯನ್ನು ಮೊದಲ ಗುರುವು ಎಂದು ಅಂದಿದ್ದಾನೆ. ಗುರುವು ಎಂದರೇ ಯಾರು? ಬೋಧಕನು ಎಂದರೇ ಯಾರು? ಎಂಬ ವಿವರ ತಿಳಿಯದ ಸ್ಥಿತಿಯಲ್ಲಿ ಮನುವು ಹೇಳಿದ್ದಾನೆ. ಆತನಿಗೆ ಅದು ಸರಿಯೇ. ಆತನು ಹೇಳಿದ್ದಾನೆಂದು ನಾವು ಈಗ ಅದೇ ಮಾತನ್ನು ಹೇಳಲಾರೆವು. ಬ್ರಹ್ಮವಿದ್ಯಾ ಶಾಸ್ತ್ರವನ್ನು ಅತಿಕ್ರಮಿಸಿ ಮಾತನಾಡಲಾರೆವು.

**ಪ್ರಶ್ನೆ :– ಆದರೇ ದೈವಧರ್ಮಗಳನ್ನು ಹೇಳಿದ ಗುರುವು ಯಾರು?**

**ಉತ್ತರ :–** ದೇವರು ಮಾತನಾಡುವುದಿಲ್ಲ ಆದ್ದರಿಂದ ದೇವರು ಹೇಳಲಾರನು. ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ದೇವರನ್ನು ಗುರುವು ಎಂದು ಹೇಳಲಾರೆವು. ಪ್ರಪಂಚದಲ್ಲಿ ಯಾರ ಮೇಲೆಯೂ ದೇವರ ಜ್ಞಾನ ಪ್ರಸಾರವಾಗಲಿಲ್ಲ. ಎಂದರೇ ಯಾವ ಮನುಷ್ಯನಿಗೂ ಜ್ಞಾನ ತಿಳಿದಿಲ್ಲ. ಈಗ ಮನುಷ್ಯನಿಗೆ ಜ್ಞಾನ ತಿಳಿದಿಲ್ಲ. ದೇವರು ಜ್ಞಾನವನ್ನು ಹೇಳಲಿಲ್ಲ. ಆದ್ದರಿಂದ ಜೀವಿಯನ್ನು, ದೇವರನ್ನು ಇಬ್ಬರನ್ನೂ ಗುರುವು ಎನ್ನುವುದಕ್ಕೆ ಅವಕಾಶವಿಲ್ಲ. ಇನ್ನು ಮಧ್ಯದಲ್ಲಿರುವ ಆತ್ಮ ಮಾತ್ರವೇ ಇತ್ತ ಜೀವಿಯ ರಹಸ್ಯವನ್ನು, ಅತ್ತ ದೇವರ ರಹಸ್ಯವನ್ನು ತಿಳಿದವನಾಗಿ ಇದ್ದು ದೇವರ ಜ್ಞಾನವನ್ನು ಯಾರಿಗೂ ತಿಳಿಯದಂತೆ ಬೋಧಿಸುತ್ತಿದ್ದಾನೆ. ಆತ್ಮ ಸ್ವತಃವಾಗಿ ಜ್ಞಾನವನ್ನು ಹೇಳುತ್ತಿದ್ದಾನೆ. ಆತನು ಯಾರ ಹತ್ತಿರ ಜ್ಞಾನವನ್ನು ಕೇಳಲಿಲ್ಲ. ಆತನೇ ಸ್ವತಃವಾಗಿ ದೇವರ ಜ್ಞಾನವನ್ನು ಹೇಳುತ್ತಿದ್ದಾನೆ. **ಅಡಗಿ ತಿಳಿಯದಂತೆ ಇರುವವನು ಆತ್ಮ ಆದ್ದರಿಂದ, ಆತನೇ ನಿಜವಾದ ಗುರುವೆಂದು ಪ್ರಪಂಚದಲ್ಲಿ ಯಾರೂ ಇಲ್ಲಿಯವರೆಗು ಗುರುತಿಸಲಾರದೇ ಹೋಗಿದ್ದಾರೆ.** ಈಗ ತಿಳಿದಿದೆಯಾ ಗುರುವುವೊಂದರ ಗುಟ್ಟನ್ನು ಸದ್ದಿಲ್ಲದಂತೆ ಬೋಧಿಸುವ ಮಧ್ಯಾತ್ಮನನ್ನೇ ಗುರುವೆಂದು ಖಚಿತವಾಗಿ ಹೇಳಬಹುದು.

**ಪ್ರಶ್ನೆ :– ದೈವಜ್ಞಾನಕ್ಕೆ ಆತ್ಮ ಗುರುವಾದರೇ, ಮನುವು ಹೇಳಿದ ಮನು ಧರ್ಮಗಳನ್ನು ಮನುವೇ ಮೊದಲು ಹೇಳಿದ್ದಾನೆ, ಆದ್ದರಿಂದ ಮನುವನ್ನು ಅಧರ್ಮಗಳನ್ನು ಹೇಳಿದ ಮೊದಲ ಗುರುವೆಂದು ಹೇಳಬಹುದಾ?**

**ಉತ್ತರ :–** ಮನುವು ಶರೀರವನ್ನು ಧರಿಸಿದ ಒಬ್ಬ ಜೀವಿಯು ಮಾತ್ರವೇ. ಜೀವಿಯು ಸ್ವತಃವಾಗಿ ಧರ್ಮಗಳನ್ನು ಬೋಧಿಸಲಾರನು, ಅಧರ್ಮಗಳನ್ನು ಬೋಧಿಸಲಾರನು. ಜೀವಿಯು ಯಾವುದನ್ನೂ ಮಾಡದವನು, ಕೈಲಾಗದವನು. ಎಲ್ಲಾ ಮಾಡುವವನು ಆತ್ಮೇ ಆಗಿರುವುದರಿಂದ ಮನುವು ಶರೀರದಲ್ಲಿನ ಮಧ್ಯಾತ್ಮವೇ ಯಾರಿಗೂ ತಿಳಿಯದಂತೆ ಮೇಲ್ನೋಟಕ್ಕೆ ಮನುವನ್ನು ತೋರಿಸುತ್ತಾ, ತಾನೇ ಅಧರ್ಮಗಳನ್ನು ಮನು ಧರ್ಮಗಳೆಂಬ ಹೆಸರಿನಿಂದ ಬೋಧಿಸಿದೆ. **ದೈವಬೋಧಕ್ಕೆ ಸಂಕಲ್ಪ ದೇವರದು, ಕಾರ್ಯ ಆತ್ಮದ್ದು. ಹಾಗೆಯೇ ಅಧರ್ಮಗಳ ಬೋಧನೆಗೆ ಸಂಕಲ್ಪ ಮಾಯೆದು, ಕೆಲಸ ಆತ್ಮದ್ದು.** ಆದ್ದರಿಂದ ಇತ್ತ ಜ್ಞಾನಕ್ಕೂ, ಅತ್ತ ಅಜ್ಞಾನಕ್ಕೂ, ಇತ್ತ ಧರ್ಮಗಳಿಗು, ಅತ್ತ ಅಧರ್ಮಗಳಿಗು ಗುರುವು ಒಬ್ಬ ಮಧ್ಯಾತ್ಮ ಎಂದೇ ಹೇಳಬಹುದು. ಈಗ ಯಾರಿಗೂ ತಿಳಿಯದ ಈ ವಿಷಯಗಳೆಲ್ಲವನ್ನೂ ಹೇಳಿರುವುದು ಮಧ್ಯಾತ್ಮವೇ. "ಮಧ್ಯಾತ್ಮ"ವೇ ವಿಶ್ವವೆಲ್ಲದಕ್ಕೂ ಗುರುವು.

*ಇಷ್ಟೇ ಸಂಗತಿಗಳು ಅಷ್ಟೇ ಸಮಾಚಾರಗಳು*



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೂ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**



**ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ,
ಸತ್ಯವನ್ನು ಸಾವಿರ ಮಂದಿ ಅಲ್ಲ ಎಂದರೂ ಅದು ಅಸತ್ಯವಲ್ಲ.**

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ = ಬೇವಕೂಫ್ = ನೃಸಿಂಹ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು "ಇಂದೂ ಸರೋವರವೆಂದು" ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ 'ಜ್ಞಾನಿ' ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು 'ಇಂದೂ' ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ 'ಇಂದೂ ಮಹಾ ಸಮುದ್ರ'ವಾಗಿ ಕರೆಯುತ್ತಿದ್ದರು. ("ತ್ರೈತಾಕಾರ ರಹಸ್ಯ" ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

# ಆದಿತ್ಯ

ತ್ರಿಮತ ಐಕ್ಯೆಕ ಗುರುವು

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org